KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ, ಡಿಸೆಂಬರ್ ೧೧, ೨೦೦೮ (ಮಾರ್ಗಶಿರ ೨೦, ಶಕ ವರ್ಷ ೧೯೩೦) | ಸಂಚಿಕೆ ೪೯ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಬಳ್ಳಾರಿ

### ಪ್ರಕಟಣೆ

**ಸಂಖ್ಯೆ: ಜಿಸಕಅ/ಎಸ್–6/ಕಾ.ಪ.ತ/ಸಿಆರ್/08–09, ದಿನಾಂಕ:30ನೇ ಅಕ್ಟೋಬರ್, 2008**

**ವಿಷಯ:** 2008–09ನೇ ಸಾಲಿನಲ್ಲಿ ಪರಿಶಿಷ್ಟ ಜಾತಿಯ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿ ನೀಡಲು ಅರ್ಜಿಗಳನ್ನು ಆಹ್ವಾನಿಸುವುದರ ಕುರಿತು.

**ಉಲ್ಲೇಖ:** 1) ಸರ್ಕಾರದ ಆದೇಶ ಸಂಖ್ಯೆ: ಎಸ್.ಡಬ್ಲ್ಯೂ.ಎಸ್–681/ಎಸ್.ಡಬ್ಲ್ಯೂ–89/ಬೆಂಗಳೂರು, ದಿನಾಂಕ: 02.11.90.

2) ಸರ್ಕಾರದ ಆದೇಶ ಸಂಖ್ಯೆ: ಸಕ.ಇ–421/ಪಕವಿ–95/ಬೆಂಗಳೂರು, ದಿನಾಂಕ:29.07.97.

3) ಆಯುಕ್ತರು, ಸ.ಕ.ಇ.ಬೆಂಗಳೂರು ಇವರ ಪ.ಸಂ.ಸ.ಕ.ಇ./ಸಮನ್ವಯ–6/ಸಿಆರ್–14/97–98, ದಿನಾಂಕ:07.08.97 ಮತ್ತು 14.10.97.

4) ಸರ್ಕಾರದ ಆದೇಶ ಸಂಖ್ಯೆ: ಸಕ.ಇ–535/ಸಕವಿ–2000, ಬೆಂಗಳೂರು, ದಿನಾಂಕ:28.03.01.

5) ಸರ್ಕಾರಿ ಆದೇಶ ಸಂ.ಸಕಇ–349/ಪಕವಿ–05, ದಿನಾಂಕ:28.01.06.

ಬಳ್ಳಾರಿ ಜಿಲ್ಲೆಯಲ್ಲಿರುವ ಪರಿಶಿಷ್ಟ ಜಾತಿಗೆ ಸೇರಿರುವ ಕಾನೂನು ಪದವೀಧರರಿಗೆ 2008–09ನೇ ಸಾಲಿಗೆ ಆಡಳಿತ ನ್ಯಾಯಾಧೀಕರಣದಲ್ಲಿ 4 ವರ್ಷಗಳ ತರಬೇತಿಯನ್ನು ನೀಡುವ ಸಲುವಾಗಿ ಅರ್ಹ ಪ.ಜಾತಿಯ ಅಭ್ಯರ್ಥಿಗಳಿಂದ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಈ ತರಬೇತಿಯನ್ನು ಪಡೆಯಲು ಇಚ್ಛಿಸುವ ಪರಿಶಿಷ್ಟ ಜಾತಿಯ ಅಭ್ಯರ್ಥಿಗಳು ಈ ಕೆಳಕಂಡ ಅರ್ಹತೆಯನ್ನು ಕಡ್ಡಾಯವಾಗಿ ಹೊಂದಿರತಕ್ಕದ್ದು.

1) ಅಭ್ಯರ್ಥಿಗಳು ಪ.ಜಾತಿಗೆ ಸೇರಿದವರಾಗಿರಬೇಕು.

2) ಬಳ್ಳಾರಿ ಜಿಲ್ಲೆಗೆ ಮಾತ್ರ ಸಂಬಂಧಿಸಿದ ಹಾಗೂ ವಕೀಲ ವೃತ್ತಿ ನಡೆಸಲು ಅರ್ಹತೆಯುಳ್ಳ ಕಾನೂನು ಪದವೀಧರರು ಮಾತ್ರ ಈ ತರಬೇತಿಗೆ ಅರ್ಹರು.

3) ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ 2 ವರ್ಷದೊಳಗೆ ಕಾನೂನು ಪದವಿಯನ್ನು ಪಡೆದಿರಬೇಕು. (ಅರ್ಜಿಯೊಂದಿಗೆ ಕಾನೂನು ಪದವಿಯ 3 ವರ್ಷದ ಅಂಕಪಟ್ಟಿಗಳ ಝೆರಾಕ್ಸ್ ಪ್ರತಿಗಳನ್ನು ಸಲ್ಲಿಸತಕ್ಕದ್ದು.)

4) ಅಭ್ಯರ್ಥಿಯ ವಯಸ್ಸು, ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕದಂದು 35 ವರ್ಷಗಳನ್ನು ಮೀರಿರಬಾರದು. ಈ ಕುರಿತು ಅಧಿಕೃತ ಪ್ರಮಾಣ ಪತ್ರ (ಎಸ್.ಎಸ್.ಎಲ್.ಸಿ.) ಅಂಕಪಟ್ಟಿ ಪ್ರತಿ ಲಗತ್ತಿಸಬೇಕು.

5) ಈ ತರಬೇತಿಗೆ ಅರ್ಜಿಯನ್ನು ಸಲ್ಲಿಸಲು ಇಚ್ಛಿಸುವ ಅಭ್ಯರ್ಥಿಗಳು ಅರ್ಜಿಗಳನ್ನು ದ್ವಿಪ್ರತಿಗಳಲ್ಲಿ ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಎಲ್ಲಾ ಪರೀಕ್ಷೆಗಳ ಅಂಕಪಟ್ಟಿಗಳ ಝೆರಾಕ್ಸ್ ಮತ್ತು ಜಾತಿ ಪ್ರಮಾಣ ಪತ್ರ, ಬಾರ್ ಕೌನ್ಸಿಲ್‌ನಲ್ಲಿ ನೊಂದಣಿ ಮಾಡಿದ ಪ್ರಮಾಣ ಪತ್ರದ ದೃಢೀಕೃತ ಪ್ರತಿಗಳೊಂದಿಗೆ ಸಲ್ಲಿಸಬೇಕು.

6) ಈಗಾಗಲೇ ಕಾನೂನು ವಿಷಯದಲ್ಲಿ ಯಾವುದಾದರೂ ತರಬೇತಿ ಪಡೆದಿರಬಾರದು.

**ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು**

1) ಈ ತರಬೇತಿಗೆ ಪ.ಜಾತಿಯ 15 ಅಭ್ಯರ್ಥಿಗಳನ್ನು ಮಾತ್ರ ಆಯ್ಕೆ ಮಾಡಲಾಗುವುದು.

2) ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ನ್ಯಾಯಾಂಗ ಆಡಳಿತ ತರಬೇತಿಯನ್ನು ಸರ್ಕಾರಿ ವಕೀಲರು, ಪಬ್ಲಿಕ್ ಪ್ರಾಸಿಕ್ಯೂಟರ್ ಅಥವಾ 20 ವರ್ಷಗಳ ಅನುಭವ ಹೊಂದಿರುವ ಹಿರಿಯ ವಕೀಲರಲ್ಲಿ ನೀಡಲಾಗುವುದು. ಈ ವಿಷಯದ ಬಗ್ಗೆ ಆಯ್ಕೆ ಸಮಿತಿಯ ತೀರ್ಮಾನವೇ ಅಂತಿಮವಾದದ್ದು.

3) ಆಯ್ಕೆಯಾದ ಅಭ್ಯರ್ಥಿಗಳಿಗೆ ಮಾಹೆಯಾನ ರೂ.1,000/- (ರೂ. ಒಂದು ಸಾವಿರ ಮಾತ್ರ) 4 ವರ್ಷದ ವರೆಗೂ ಸ್ಟೈಫಂಡ್ ನೀಡಲಾಗುವುದು.

4) ಈ ತರಬೇತಿಗೆ ಅಭ್ಯರ್ಥಿಗಳನ್ನು ಮಾನ್ಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಬಳ್ಳಾರಿ ಇವರ ಅಧ್ಯಕ್ಷತೆಯಲ್ಲಿ ರಚಿತವಾದ ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯ ಸಂದರ್ಶನದ ಮೂಲಕ ಆಯ್ಕೆ ಮಾಡಲಾಗುವುದು.

5) ಆಯ್ಕೆಯಾದ ಅಭ್ಯರ್ಥಿಗಳು ತರಬೇತಿಯನ್ನು ಮಧ್ಯದಲ್ಲಿ ಬಿಟ್ಟುಹೋಗಬಾರದು (ಕೇಂದ್ರ/ ರಾಜ್ಯ ಸರ್ಕಾರದಲ್ಲಿ ಉದ್ಯೋಗ ದೊರೆತ ಅಭ್ಯರ್ಥಿಗಳಿಗೆ ಈ ನಿಬಂಧನೆ ಅನ್ವಯಿಸುವುದಿಲ್ಲ).

6) ಆಯ್ಕೆಯಾದ ಅಭ್ಯರ್ಥಿಗಳು ಸುಳ್ಳು ಮಾಹಿತಿ ದಾಖಲೆ ಒದಗಿಸಿದ್ದಲ್ಲಿ, ಅಂತಹವರನ್ನು ಕಾನೂನಿನ ಶಿಸ್ತಿನ ಕ್ರಮಕ್ಕೆ ಒಳಪಡಿಸಲಾಗುವುದು. ಹಾಗೂ ತರಬೇತಿಯನ್ನು ಮಧ್ಯದಲ್ಲಿ ಬಿಟ್ಟುಹೋದಲ್ಲಿ, ಅಂತಹವರಿಗೆ ನೀಡಿದ ಸ್ಟೈಫಂಡ್ ಹಣವನ್ನು ಶೇ.10% ರಷ್ಟು ಬಡ್ಡಿ ಸೇರಿಸಿ, ಭೂ ಕಂದಾಯ ಬಾಕಿ ಎಂದು ಪರಿಗಣಿಸಿ, ವಸೂಲಿ ಮಾಡಲಾಗುವುದು. ಈ ಬಗ್ಗೆ ಆಯ್ಕೆಯಾದ ಅಭ್ಯರ್ಥಿಗಳು ಕರಾರು ಪತ್ರವನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ ಇವರಿಗೆ ಬರೆದುಕೊಡತಕ್ಕದ್ದು.

7) ಸಂದರ್ಶನದಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ಮಾತ್ರ ಈ ಕಛೇರಿಯಿಂದ ತಿಳಿಸಲಾಗುವುದು ಹಾಗೂ ತರಬೇತಿ ಪಡೆಯಲು ಆಯ್ಕೆಯಾದ ಅಭ್ಯರ್ಥಿಗಳು ಆಯ್ಕೆ ಪತ್ರ ತಲುಪಿದ 15 ದಿನಗಳೊಳಗಾಗಿ ತಮ್ಮ ಒಪ್ಪಿಗೆ ಪತ್ರವನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ ಇವರಿಗೆ ಸಲ್ಲಿಸತಕ್ಕದ್ದು.

8) ಪೂರ್ಣ ಭರ್ತಿ ಮಾಡಿದ ಅರ್ಜಿಗಳನ್ನು (ದ್ವಿ ಪ್ರತಿಗಳಲ್ಲಿ) ಕಾರ್ಯದರ್ಶಿಗಳು, ಜಿಲ್ಲಾ ಮಟ್ಟದ ನ್ಯಾಯಾಂಗ ತರಬೇತಿ ಆಯ್ಕೆ ಸಮಿತಿ ಮತ್ತು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ ಇವರಿಗೆ ದಿನಾಂಕ:29.11.2008 ರಂದು ಸಾಯಂಕಾಲ 5.30 ಗಂಟೆಯೊಳಗೆ ಸಲ್ಲಿಸತಕ್ಕದ್ದು.

9) ಅಪೂರ್ಣ ಮಾಹಿತಿ ಸಲ್ಲಿಸಿದ ಹಾಗೂ ಅನರ್ಹ ಅರ್ಜಿಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಹಕ್ಕು ಆಯ್ಕೆ ಸಮಿತಿಗೆ ಇರುತ್ತದೆ.

**ಸೂಚನೆ:** ಅರ್ಜಿಗಳನ್ನು ಮತ್ತು ಹೆಚ್ಚಿನ ಮಾಹಿತಿಯನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಬಳ್ಳಾರಿ ಹಾಗೂ ಸಂಬಂಧಪಟ್ಟ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಿಂದ ಪಡೆಯತಕ್ಕದ್ದು.

**ಎಂ.ವಿ. ಶ್ರೀನಿವಾಸುಲು**
ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ
ಹಾಗೂ ಸದಸ್ಯ ಕಾರ್ಯದರ್ಶಿ,
ಕಾನೂನು ಪದವೀಧರರ ನ್ಯಾಯಾಂಗ
ಆಡಳಿತ ತರಬೇತಿ ಆಯ್ಕೆ ಸಮಿತಿ, ಬಳ್ಳಾರಿ.

**ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಬಳ್ಳಾರಿ**

**ಪ್ರಕಟಣೆ**

**ಸಂಖ್ಯೆ: ಜಿಸಕಅ/ಎಸ್-6/ಕಾ.ಪ.ತ/ಸಿಆರ್/08-09, ದಿನಾಂಕ:30ನೇ ಅಕ್ಟೋಬರ್, 2008**

**ವಿಷಯ:** 2008-09ನೇ ಸಾಲಿನಲ್ಲಿ ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿ ನೀಡಲು ಅರ್ಜಿಗಳನ್ನು ಆಹ್ವಾನಿಸುವುದರ ಕುರಿತು.

**ಉಲ್ಲೇಖ:** 1) ಸರ್ಕಾರದ ಆದೇಶ ಸಂಖ್ಯೆ: ಎಸ್.ಡಬ್ಲ್ಯೂ.ಎಸ್-681/ಎಸ್.ಡಬ್ಲ್ಯೂ-89/ಬೆಂಗಳೂರು, ದಿನಾಂಕ: 02.11.90.

2) ಸರ್ಕಾರದ ಆದೇಶ ಸಂಖ್ಯೆ: ಸಕ.ಇ-421/ಪಕವಿ-95/ಬೆಂಗಳೂರು, ದಿನಾಂಕ:29.07.97.

3) ಆಯುಕ್ತರು, ಸ.ಕ.ಇ.ಬೆಂಗಳೂರು ಇವರ ಪ.ಸಂ.ಸ.ಕ.ಇ./ಸಮನ್ವಯ-6/ಸಿಆರ್-14/97-98, ದಿನಾಂಕ:07.08.97 ಮತ್ತು 14.10.97.

4) ಸರ್ಕಾರದ ಆದೇಶ ಸಂಖ್ಯೆ: ಸಕ.ಇ-535/ಸಕವಿ-2000, ಬೆಂಗಳೂರು, ದಿನಾಂಕ:28.03.01.

5) ಸರ್ಕಾರಿ ಆದೇಶ ಸಂ.ಸಕಇ-349/ಪಕವಿ-05, ದಿನಾಂಕ:28.01.06.

ಬಳ್ಳಾರಿ ಜಿಲ್ಲೆಯಲ್ಲಿರುವ ಪರಿಶಿಷ್ಟ ವರ್ಗಕ್ಕೆ ಸೇರಿರುವ ಕಾನೂನು ಪದವೀಧರರಿಗೆ 2008-09ನೇ ಸಾಲಿಗೆ ಆಡಳಿತ ನ್ಯಾಯಾಧೀಕರಣದಲ್ಲಿ 4 ವರ್ಷಗಳ ತರಬೇತಿಯನ್ನು ನೀಡುವ ಸಲುವಾಗಿ ಅರ್ಹ ಪರಿಶಿಷ್ಟ ವರ್ಗದ ಅಭ್ಯರ್ಥಿಗಳಿಂದ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಈ ತರಬೇತಿಯನ್ನು ಪಡೆಯಲು ಇಚ್ಛಿಸುವ ಪರಿಶಿಷ್ಟ ವರ್ಗದ ಅಭ್ಯರ್ಥಿಗಳು ಈ ಕೆಳಕಂಡ ಅರ್ಹತೆಯನ್ನು ಕಡ್ಡಾಯವಾಗಿ ಹೊಂದಿರತಕ್ಕದ್ದು.

1) ಅಭ್ಯರ್ಥಿಗಳು ಪರಿಶಿಷ್ಟ ವರ್ಗಕ್ಕೆ ಸೇರಿದವರಾಗಿರಬೇಕು.

2) ಬಳ್ಳಾರಿ ಜಿಲ್ಲೆಗೆ ಮಾತ್ರ ಸಂಬಂಧಿಸಿದ ಹಾಗೂ ವಕೀಲ ವೃತ್ತಿ ನಡೆಸಲು ಅರ್ಹತೆಯುಳ್ಳ ಕಾನೂನು ಪದವೀಧರರು ಮಾತ್ರ ಈ ತರಬೇತಿಗೆ ಅರ್ಹರು.

3) ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ 2 ವರ್ಷದೊಳಗೆ ಕಾನೂನು ಪದವಿಯನ್ನು ಪಡೆದಿರಬೇಕು. (ಅರ್ಜಿಯೊಂದಿಗೆ ಕಾನೂನು ಪದವಿಯ 3 ವರ್ಷದ ಅಂಕಪಟ್ಟಿಗಳ ಝೆರಾಕ್ಸ್ ಪ್ರತಿಗಳನ್ನು ಸಲ್ಲಿಸತಕ್ಕದ್ದು.)

4) ಅಭ್ಯರ್ಥಿಯ ವಯಸ್ಸು, ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕದಂದು 35 ವರ್ಷಗಳನ್ನು ಮೀರಿರಬಾರದು. ಈ ಕುರಿತು ಅಧಿಕೃತ ಪ್ರಮಾಣ ಪತ್ರ (ಎಸ್.ಎಸ್.ಎಲ್.ಸಿ.) ಅಂಕಪಟ್ಟಿ ಪ್ರತಿ ಲಗತ್ತಿಸಬೇಕು.

5) ಈ ತರಬೇತಿಗೆ ಅರ್ಜಿಯನ್ನು ಸಲ್ಲಿಸಲು ಇಚ್ಛಿಸುವ ಅಭ್ಯರ್ಥಿಗಳು ಅರ್ಜಿಗಳನ್ನು ದ್ವಿಪ್ರತಿಗಳಲ್ಲಿ ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಎಲ್ಲಾ ಪರೀಕ್ಷೆಗಳ ಅಂಕಪಟ್ಟಿಗಳ ಝೆರಾಕ್ಸ್ ಮತ್ತು ಜಾತಿ ಪ್ರಮಾಣ ಪತ್ರ, ಬಾರ್ ಕೌನ್ಸಿಲ್‌ನಲ್ಲಿ ನೊಂದಣಿ ಮಾಡಿದ ಪ್ರಮಾಣ ಪತ್ರದ ದೃಢೀಕೃತ ಪ್ರತಿಗಳೊಂದಿಗೆ ಸಲ್ಲಿಸಬೇಕು.

6) ಈಗಾಗಲೇ ಕಾನೂನು ವಿಷಯದಲ್ಲಿ ಯಾವುದಾದರೂ ತರಬೇತಿ ಪಡೆದಿರಬಾರದು.

**ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು**

1) ಈ ತರಬೇತಿಗೆ ಪರಿಶಿಷ್ಟ ವರ್ಗದ 15 ಅಭ್ಯರ್ಥಿಗಳನ್ನು ಮಾತ್ರ ಆಯ್ಕೆ ಮಾಡಲಾಗುವುದು.

2) ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ನ್ಯಾಯಾಂಗ ಆಡಳಿತ ತರಬೇತಿಯನ್ನು ಸರ್ಕಾರಿ ವಕೀಲರು, ಪಬ್ಲಿಕ್ ಪ್ರಾಸಿಕ್ಯೂಟರ್ ಅಥವಾ 20 ವರ್ಷಗಳ ಅನುಭವ ಹೊಂದಿರುವ ಹಿರಿಯ ವಕೀಲರಲ್ಲಿ ನೀಡಲಾಗುವುದು. ಈ ವಿಷಯದ ಬಗ್ಗೆ ಆಯ್ಕೆ ಸಮಿತಿಯ ತೀರ್ಮಾನವೇ ಅಂತಿಮವಾದದ್ದು.

3) ಆಯ್ಕೆಯಾದ ಅಭ್ಯರ್ಥಿಗಳಿಗೆ ಮಾಹೆಯಾನ ರೂ.1,000/- (ರೂ. ಒಂದು ಸಾವಿರ ಮಾತ್ರ) 4 ವರ್ಷದ ವರೆಗೂ ಸ್ಟೈಫಂಡ್ ನೀಡಲಾಗುವುದು.

4) ಈ ತರಬೇತಿಗೆ ಅಭ್ಯರ್ಥಿಗಳನ್ನು ಮಾನ್ಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಬಳ್ಳಾರಿ ಇವರ ಅಧ್ಯಕ್ಷತೆಯಲ್ಲಿ ರಚಿತವಾದ ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯ ಸಂದರ್ಶನದ ಮೂಲಕ ಆಯ್ಕೆ ಮಾಡಲಾಗುವುದು.

5) ಆಯ್ಕೆಯಾದ ಅಭ್ಯರ್ಥಿಗಳು ತರಬೇತಿಯನ್ನು ಮಧ್ಯದಲ್ಲಿ ಬಿಟ್ಟುಹೋಗಬಾರದು (ಕೇಂದ್ರ/ ರಾಜ್ಯ ಸರ್ಕಾರದಲ್ಲಿ ಉದ್ಯೋಗ ದೊರೆತ ಅಭ್ಯರ್ಥಿಗಳಿಗೆ ಈ ನಿಬಂಧನೆ ಅನ್ವಯಿಸುವುದಿಲ್ಲ).

6) ಆಯ್ಕೆಯಾದ ಅಭ್ಯರ್ಥಿಗಳು ಸುಳ್ಳು ಮಾಹಿತಿ ದಾಖಲೆ ಒದಗಿಸಿದ್ದಲ್ಲಿ, ಅಂತಹವರನ್ನು ಕಾನೂನಿನ ಶಿಸ್ತಿನ ಕ್ರಮಕ್ಕೆ ಒಳಪಡಿಸಲಾಗುವುದು. ಹಾಗೂ ತರಬೇತಿಯನ್ನು ಮಧ್ಯದಲ್ಲಿ ಬಿಟ್ಟುಹೋದಲ್ಲಿ, ಅಂತಹವರಿಗೆ ನೀಡಿದ ಸ್ಟೈಫಂಡ್ ಹಣವನ್ನು ಶೇ.10% ರಷ್ಟು ಬಡ್ಡಿ ಸೇರಿಸಿ, ಭೂ ಕಂದಾಯ ಬಾಕಿ ಎಂದು ಪರಿಗಣಿಸಿ, ವಸೂಲಿ ಮಾಡಲಾಗುವುದು. ಈ ಬಗ್ಗೆ ಆಯ್ಕೆಯಾದ ಅಭ್ಯರ್ಥಿಗಳು ಕರಾರು ಪತ್ರವನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ ಇವರಿಗೆ ಬರೆದುಕೊಡತಕ್ಕದ್ದು.

7) ಸಂದರ್ಶನದಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ಮಾತ್ರ ಈ ಕಛೇರಿಯಿಂದ ತಿಳಿಸಲಾಗುವುದು ಹಾಗೂ ತರಬೇತಿ ಪಡೆಯಲು ಆಯ್ಕೆಯಾದ ಅಭ್ಯರ್ಥಿಗಳು ಆಯ್ಕೆ ಪತ್ರ ತಲುಪಿದ 15 ದಿನಗಳೊಳಗಾಗಿ ತಮ್ಮ ಒಪ್ಪಿಗೆ ಪತ್ರವನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ ಇವರಿಗೆ ಸಲ್ಲಿಸತಕ್ಕದ್ದು.

8) ಪೂರ್ಣ ಭರ್ತಿ ಮಾಡಿದ ಅರ್ಜಿಗಳನ್ನು (ದ್ವಿ ಪ್ರತಿಗಳಲ್ಲಿ) ಕಾರ್ಯದರ್ಶಿಗಳು, ಜಿಲ್ಲಾ ಮಟ್ಟದ ನ್ಯಾಯಾಂಗ ತರಬೇತಿ ಆಯ್ಕೆ ಸಮಿತಿ ಮತ್ತು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ ಇವರಿಗೆ ದಿನಾಂಕ:29.11.2008 ರಂದು ಸಾಯಂಕಾಲ 5.30 ಗಂಟೆಯೊಳಗೆ ಸಲ್ಲಿಸತಕ್ಕದ್ದು.

9) ಅಪೂರ್ಣ ಮಾಹಿತಿ ಸಲ್ಲಿಸಿದ ಹಾಗೂ ಅನರ್ಹ ಅರ್ಜಿಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಹಕ್ಕು ಆಯ್ಕೆ ಸಮಿತಿಗೆ ಇರುತ್ತದೆ.

**ಸೂಚನೆ:** ಅರ್ಜಿಗಳನ್ನು ಮತ್ತು ಹೆಚ್ಚಿನ ಮಾಹಿತಿಯನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಬಳ್ಳಾರಿ ಹಾಗೂ ಸಂಬಂಧಪಟ್ಟ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಿಂದ ಪಡೆಯತಕ್ಕದ್ದು.

**ಎಂ.ವಿ. ಶ್ರೀನಿವಾಸುಲು**
ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ
ಹಾಗೂ ಸದಸ್ಯ ಕಾರ್ಯದರ್ಶಿ,
ಕಾನೂನು ಪದವೀಧರರ ನ್ಯಾಯಾಂಗ
ಆಡಳಿತ ತರಬೇತಿ ಆಯ್ಕೆ ಸಮಿತಿ, ಬಳ್ಳಾರಿ.

ಪಿ.ಆರ್.1292

## ಅಧ್ಯಕ್ಷರು, ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಧಾರವಾಡ

## ಅಧಿಸೂಚನೆ

**ಸಂಖ್ಯೆ:ಧಾಜಿಗ್ರಾವೇ/ ಆಡಳಿತ/ ವಹಿ/20/2008–09, ದಿನಾಂಕ:24ನೇ ನವೆಂಬರ್, 2008**

ಸಾರ್ವಜನಿಕರಿಗೆ ಹಾಗೂ ಎಲ್ಲಾ ಸರ್ಕಾರಿ ಇಲಾಖೆಗಳಿಗೆ ಈ ಅಧಿಸೂಚನೆಯ ಮೂಲಕ ತಿಳಿಸಬಯಸುವುದೇನೆಂದರೆ, ಧಾರವಾಡ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯು, ಶಿಂಗೇ ಬಿಲ್ಡಿಂಗ್, ವಿದ್ಯಾಗಿರಿ ಪೋಸ್ಟ್ ಆಫೀಸ್ ಎದುರುಗಡೆ, ಧಾರವಾಡ ಇಲ್ಲಿ ಕಾರ್ಯಕಲಾಪಗಳನ್ನು ಇಲ್ಲಿಯವರೆಗೆ ನಡೆಸುತ್ತಿರುವುದು ಸರಿಯಷ್ಟೇ. ಆದರೆ, ಈಗ ಈ ಫೋರಂ ಮತ್ತು ಆಫೀಸನ್ನು ಧಾರವಾಡ ಸಿವಿಲ್ ಕೋರ್ಟ್ ಆವರಣದಲ್ಲಿ ಸ್ಥಳಾಂತರಿಸಿರುವುದರಿಂದ ದಿನಾಂಕ:03.12.2008 ರಿಂದ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಎಲ್ಲಾ ಕಾರ್ಯಕಲಾಪಗಳನ್ನು ಸ್ಥಳಾಂತರಿಸಿದ ಫೋರಂನಲ್ಲಿ ನಡೆಸಲಾಗುವುದು.

**ಇನ್ನು ಮುಂದೆ ವ್ಯವಹರಿಸುವ ವಿಳಾಸ:**
ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ,
ಸಿವಿಲ್ ಕೋರ್ಟ್ ಆವರಣ, ಪಿ.ಬಿ. ರಸ್ತೆ, ಧಾರವಾಡ–580 001.

ಅಧ್ಯಕ್ಷರು,
ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ,
ಧಾರವಾಡ.

ಪಿ.ಆರ್.1329

## ಸಮಾಜ ಕಲ್ಯಾಣ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಸಕಇ 334 ಬಿಇಟಿ 2008, ಬೆಂಗಳೂರು, ದಿನಾಂಕ:12ನೇ ನವೆಂಬರ್, 2008**

ದಿನಾಂಕ:01.01.2008 ರಂದು ಚಾಲ್ತಿಯಲ್ಲಿರುವಂತೆ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಸಹಾಯಕ ನಿರ್ದೇಶಕರು/ ಜಿಲ್ಲಾ ಹಿಂದುಳಿದ ವರ್ಗಗಳ ಅಧಿಕಾರಿಗಳ ತಾತ್ಕಾಲಿಕ ಪದಕ್ರಮ ಪಟ್ಟಿಯನ್ನು ಈ ಕೆಳಗಿನಂತೆ ಪ್ರಕಟಿಸಲಾಗಿದೆ.

| ಕ್ರ. ಸಂ. | ಅಧಿಕಾರಿಗಳ ಹೆಸರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಹಾಲಿ ಹುದ್ದೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ದಿನಾಂಕ | ಷರಾ |
|---|---|---|---|---|---|
| 1. | ಅರವಿಂದ ಎನ್. ಪ್ರಭಾ | 18.10.56 | 03.02.84 | 03.02.84 | |
| 2. | ಪ್ರಭುಸ್ವಾಮಿ | 05.02.55 | 01.02.84 | 01.02.84 | |
| 3. | ಶಿವಣ್ಣ | 02.02.56 | 01.02.84 | 01.02.84 | |
| 4. | ಬಿ. ಗಿರೀಶ್ | 20.06.57 | 30.01.84 | 30.01.84 | |
| 5. | ಪಿ.ಎ. ಗಣಪತಿ | 19.06.55 | 01.02.84 | 01.02.84 | |
| 6. | ಎಸ್.ಇ. ದೇವಯ್ಯ | 04.06.54 | 05.11.84 | 05.11.84 | |
| 7. | ಎಸ್.ಟಿ. ದೇವರಾಜು | 23.03.62 | 01.03.90 | 10.09.98 | |
| 8. | ಟಿ.ಬಿ. ಬಿರಾದಾರ್ | 01.06.50 | 15.12.75 | 13.04.99 | |
| 9. | ಹೆಚ್.ಎಂ. ಪೂಜಾರ್ | 12.04.55 | 20.08.82 | 13.04.99 | |
| 10. | ಲಕ್ಷ್ಮ ನಾಯಕ್ | 22.07.56 | 06.08.80 | 23.07.99 | |
| 11. | ಜಿ. ಜಗದೀಶ್ | 25.05.70 | 18.07.96 | 01.01.04 | |
| 12. | ಕೆ.ಜಿ. ತಿಮ್ಮಾರೆಡ್ಡಿ | 28.11.51 | 05.12.75 | 10.02.04 | |
| 13. | ಡಾ: ಸಿ.ಕೆ. ಜಗದೀಶ ಕುಮಾರ್ | 04.06.70 | 29.08.96 | 01.03.04 | |
| 14. | ವೈ. ಈರಣ್ಣ | 15.04.53 | 29.09.81 | 04.03.04 | |

| ಕ್ರ. ಸಂ. | ಅಧಿಕಾರಿಗಳ ಹೆಸರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಹಾಲಿ ಹುದ್ದೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ದಿನಾಂಕ | ಷರಾ |
|---|---|---|---|---|---|
| 15. | ಜಿ. ಸೀತಾರಾಮಪ್ಪ | 01.06.51 | 05.08.75 | 06.03.04 | |
| 16. | ಪ್ರಭಾಕರ್ ಹೆಚ್.ಜಿ. | 15.05.79 | 05.07.06 | 05.07.06 | |
| 17. | ಪ್ರದೀಪ್ ಬಿ.ಎಸ್. | 12.03.78 | 28.06.06 | 28.06.06 | |
| 18. | ರಾಜಪ್ಪ ಎನ್. | 04.06.81 | 05.07.06 | 05.07.06 | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಬ್ಬಯ್ಯ**

ಪಿ.ಆರ್.1330

ಸರ್ಕಾರದ ಅಧೀನ ಕಾರ್ಯದರ್ಶಿ–II,

ಸಮಾಜ ಕಲ್ಯಾಣ ಇಲಾಖೆ.

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003

**Sub:** KVAT Act, 2003-Clarification under Section 59(4) regarding the rate of tax applicable on (i) Baby Diaper, and (ii) Adult Diaper.

**Ref:** Application Dated:16.09.2008 of M/s Narang Plastics Pvt Ltd., Plot No.303, 5th Main, 4th Phase, Peenya Industrial Area, Bangalore-560058.

In its application cited above, M/s Narang Plastics Pvt. Ltd., Plot No.303, 5th Main, 4th Phase, Peenya Industrial Area, Bangalore-560058 has sought clarification regarding the rate of tax applicable on (i) Baby Diaper and (ii) Adult Diaper.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No.CLR.CR.91/08-09, Dated:18th November, 2008**

It is hereby clarified that i) Baby Diaper and ii) Adult Diaper are taxable at 12.5% under Section 4(1) (b) of the KVAT Act, 2003.

**B.A. HARISH GOWDA**

PR-1334

Commissioner of Commercial Taxes,

(Karnataka), Bangalore.

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003

**Sub:** The KVAT Act, 2003-Clarification under Section 59(4) of the rate of tax applicable on assembling of parts to build the induction hardening machine.

**Ref:** Application Dated:18.08.2008 of M/s EFD Induction Ltd., Plot No.16, C & D, KIADB Industrial Area, Attibele, Bangalore-562107.

In its application cited above, M/s EFD Induction Ltd., Plot No.16, C & D, KIADB Industrial Area, Attibele, Bangalore-562107 has sought clarification regarding the rate of tax applicable on assembling of parts to build the induction hardening machine.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of

revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No.CLR.CR.113/08-09, Dated:11th November, 2008**

It is hereby clarified that Induction Hardening Machines falling under CET Code 8514 are taxable at 4% under entry Sl.No.20 of III Schedule to the KVAT Act, 2003 as per Notification No.FD 316 CSL 2005 (1), Dated:05.08.2005.

**B.A. HARISH GOWDA**
Commissioner of Commercial Taxes,
(Karnataka), Bangalore.

PR-1335

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003-Clarification on the rate of tax applicable to 'Vaseline-White Petroleum jelly'-regarding.

**Ref:** Application Dated:29.11.2007 of M/s United Marketing, No.324, Mysore Road, Opp. Kwality Biscuits Factory, Bangalore-560039.

In its application cited above, M/s United Marketing, (Registered partnarship Firm) No.324, Mysore Road, Opp. Kwality Biscuits Factory, Bangalore-560039 has sought clarification regarding the rate of tax applicable on 'Vaseline-White Petroleum jelly'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No.CLR.CR.258/07-08, Dated:11th November, 2008**

It is hereby clarified that 'Non-perfumed Vaseline White Petroleum Jelly-I.P. Grade' is taxable at 4% under entry Sl.No.60 of III Schedule to the KVAT Act, 2003.

**B.A. HARISH GOWDA**
Commissioner of Commercial Taxes,
(Karnataka), Bangalore.

PR-1336

**ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಸ್ಥಳೀಯ ಮೌಲ್ಯವರ್ಧಿತ ತೆರಿಗೆ–210, ಮಂಡ್ಯ**

**FORMAT**

| Number (including code no) declaration form/s lost destroyed or stolen | Name and address of the dealer whom declaration form/s is/ are issued by the department with date of issue | Registration Certification No. of the dealer under CST. Act.1995 | The address of the dealer to whom the declaration is/are sent | Date of issue of form/s by the dealer | Whether lost/ destroyed or stolen | Remarks |
|---|---|---|---|---|---|---|
| NN075549 | Sri Jeeyaram Chowdary Prof: National Plywood and Hardware Address: bus stand Road, Pandavapura, Mandya District. | TIN No. 29080022860 | Blank | 02.02.2006 | Lost | |

ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು,
ಸ್ಥಳೀಯ ಮೌಲ್ಯವರ್ಧಿತ ತೆರಿಗೆ–210, ಮಂಡ್ಯ

PR-1337

**ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬಹುಮಹಡಿ ಕಟ್ಟಡ, ಬೆಂಗಳೂರು**

**ಸಂಖ್ಯೆ: ಆಸಾನಿ.120/ಆಡಳಿತ–1ಎ/ 2008, ಬೆಂಗಳೂರು, ದಿನಾಂಕ:24ನೇ ಅಕ್ಟೋಬರ್, 2008**

**ವಿಷಯ:** ಶ್ರೀ ಆರ್. ಭಾಸ್ಕರನ್, ಸಹಾಯಕ ಸಾಂಖ್ಯಿಕ ಅಧಿಕಾರಿ (ಸಮೂಹ 'ಸಿ' ವೇತನ ಶ್ರೇಣಿ ರೂ.10000–18500) ಇವರ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ ಸೇವೆಯಿಂದ ಅಮಾನತ್ತುಗೊಳಿಸುವ ಕುರಿತು.

**ಉಲ್ಲೇಖ:** 1) ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ರಾಮನಗರ ಇವರ ಪತ್ರದ ಸಂಖ್ಯೆ: ಜಿಸಂಸಂ/ರಾನ/685/2008–09, ದಿನಾಂಕ:15.09.2008.

2) ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ರಾಮನಗರ ಇವರ ಪತ್ರದ ಸಂಖ್ಯೆ: ಜಿಸಂಸಂ/ಆಡಳಿತ/2008–09, ದಿನಾಂಕ:14.10.2008.

**ಪ್ರಸ್ತಾವನೆ:**

ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ರಾಮನಗರ ಜಿಲ್ಲೆ ಇವರ ಪತ್ರದ ಸಂಖ್ಯೆ: ಜಿಸಂಸಂ/ರಾನ/685/2008–09, ದಿನಾಂಕ:15.09.2008ರಲ್ಲಿ ಅವರ ಕಛೇರಿಯ ಸಹಾಯಕ ಸಾಂಖ್ಯಿಕ ಅಧಿಕಾರಿಯಾದ ಶ್ರೀ ಆರ್. ಭಾಸ್ಕರನ್, ಅವರ ಕುರಿತು ಈ ಕೆಳಗೆ ತಿಳಿಸಲಾದ ಅಂಶಗಳನ್ನೊಳಗೊಂಡಂತೆ ದೂರು ಸಲ್ಲಿಸಿರುತ್ತಾರೆ.

1) ಅವರಿಗೆ ಹಂಚಿಕೆ ಮಾಡಲಾದ ಸರ್ಕಾರದ ಕರ್ತವ್ಯ ನಿರ್ವಹಣೆಯಲ್ಲಿ ಬೇಜವಾಬ್ದಾರಿತನ, ನಿರ್ಲಕ್ಷತೆ ಮೇಲಾಧಿಕಾರಿಗಳ ಆದೇಶಗಳನ್ನು ಪಾಲಿಸದೆ ಇರುವುದು, ಇತ್ಯಾದಿ.

2) ಕರ್ತವ್ಯಕ್ಕೆ ದಿನಾಂಕ:30.06.2008, 01.07.2008, 04.07.2008, 19.07.2008, 24.07.2008, 25.07.2008, 31.07.2008, 11.08.2008, 20.08.2008, 21.08.2008, 22.08.2008, 26.08.2008 30.08.2008 ಮತ್ತು 11.09.2008 ದಿನಗಳಂದು ಅನಧಿಕೃತ ಗೈರುಹಾಜರಾಗಿ ನಂತರ ಸಾಂದರ್ಭಿಕ ರಜೆ ಅರ್ಜಿ ಸಲ್ಲಿಸಿರುವುದಾಗಿ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ವರದಿ ಮಾಡಿರುತ್ತಾರೆ. ಕರ್ನಾಟಕ ನಾಗರಿಕ ಸೇವಾ ನಿಯಮಗಳು, 1957ರ ಅನುಬಂಧ–'ಬಿ' ರಲ್ಲಿನ "ಸಾಂದರ್ಭಿಕ ರಜೆ ನಿಯಮಗಳ" ಅನ್ವಯ ಸರ್ಕಾರಿ ನೌಕರನೊಬ್ಬನಿಗೆ ಪ್ರತಿ ವರ್ಷ (calendar year) ಕೇವಲ 15 ದಿನಗಳ ಸಾಂದರ್ಭಿಕ ರಜೆಯನ್ನು ಮಂಜೂರು ಮಾಡಬಹುದಾಗಿದ್ದರಿಂದ, ಪ್ರಸ್ತುತ ಪ್ರಕರಣದಲ್ಲಿ ಶ್ರೀ ಆರ್. ಭಾಸ್ಕರನ್, ಸಹಾಯಕ ಸಾಂಖ್ಯಿಕ ಅಧಿಕಾರಿ ಅವರು ಜೂನ್ 2008 ರಿಂದ ಆಗಸ್ಟ್ 2008ರ ಅವಧಿಯಲ್ಲಿ 14 ದಿನಗಳಷ್ಟು ಸಾಂದರ್ಭಿಕ ರಜೆಗಾಗಿ ಅರ್ಜಿಯನ್ನು ಸಲ್ಲಿಸಿದ್ದರಿಂದ ಹಾಗೂ ಅದೇ ನಿಯಮಗಳ ಉಪ ನಿಯಮ 1(ಬಿ) ರಲ್ಲಿ "ಯಾವುದೇ ಕಾರಣದ ಮೇರೆಗೆ ಸಾಂದರ್ಭಿಕ ರಜೆ ಅವಶ್ಯವಿರುವಲ್ಲಿ, ಸಕ್ಷಮ ಅಧಿಕಾರಿಯು ಅಂತಹ ರಜೆಯನ್ನು ಮಂಜೂರು ಮಾಡದ ಹೊರತು, ಯಾವ ಸರ್ಕಾರಿ ನೌಕರನೂ ಕರ್ತವ್ಯಕ್ಕೆ ಗೈರುಹಾಜರಾಗತಕ್ಕದಲ್ಲವಾದ್ದರಿಂದ" ಸದರಿ ಸಹಾಯಕ ಸಾಂಖ್ಯಿಕ ಅಧಿಕಾರಿಗಳು ಈ ನಿಯಮಗಳಿಗೆ ವಿರುದ್ಧವಾಗಿ ವರ್ತಿಸಿದ್ದರಲ್ಲದೆ, ಅದೇ ನಿಯಮಗಳ ನಿಯಮ (1ಎ) ರ ಅನ್ವಯ, "ಸರ್ಕಾರಿ ನೌಕರನು ಸಾಂದರ್ಭಿಕ ರಜೆಯನ್ನು ಹಕ್ಕು ಎಂದು ತೆಗೆದುಕೊಳ್ಳುವಂತಿಲ್ಲವಾದ್ದರಿಂದ, ಈ ವಿಷಯದಲ್ಲಿ ಸದರಿ ಸರ್ಕಾರಿ ನೌಕರನು ಗಂಭೀರ ಸ್ವರೂಪದ ದುರ್ನಡತೆ/ ಲೋಪದೋಷ ಎಸಗಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಸದರಿ ಸಹಾಯಕ ಸಾಂಖ್ಯಿಕ ಅಧಿಕಾರಿಯು ಆತನ ವೇತನ ಪ್ರಮಾಣದ ಅನ್ವಯ ಅಗತ್ಯವಾಗಿ ವೇತನದಿಂದ ಕಟಾಯಿಸಬೇಕಾದ ಮೊಬಲಗನ್ನು ಕಟಾಯಿಸದಂತೆ ಒತ್ತಾಯಿಸುವುದು, ಕಛೇರಿಯ ದೂರವಾಣಿಯನ್ನು ವೈಯಕ್ತಿಕ ಕಾರ್ಯಕ್ಕಾಗಿ ದುರುಪಯೋಗಪಡಿಸಿಕೊಳ್ಳುವುದು, ಅನಧಿಕೃತ ಗೈರುಹಾಜರಾಗಿ ಮೇಲಧಿಕಾರಿಗಳ ಅನುಮತಿ ಇಲ್ಲದೆ ಹಾಜರಿ ಪುಸ್ತಕದಲ್ಲಿ ಸಹಿ ಮಾಡುವುದು ಮತ್ತು ಸಹೋದ್ಯೋಗಿಗಳೊಂದಿಗೆ ದುರ್ವರ್ತನೆ, ಇತ್ಯಾದಿಗಳನ್ನು ಎಸಗಿರುತ್ತಾರೆಂದು ವರದಿ ಸಲ್ಲಿಸಿರುತ್ತಾರೆ.

ಸರ್ಕಾರಿ ನೌಕರರಾದ ನೀವು ಈ ಕೆಳಗೆ ನಮೂದಿಸಲಾದ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆದುಕೊಂಡು ಸುಸ್ತಿದಾರನಾಗಿರುವುದು (defaulter), ಆ ಸಂಸ್ಥೆಗಳು ಮಾಡಲಾದ ಪತ್ರವ್ಯವಹಾರಗಳಿಂದ ಕಂಡುಬರುತ್ತದೆ.

(ಎ) ದೀಪಕ್ ಸಹಕಾರಿ ಬ್ಯಾಂಕ್ ನಿಯಮಿತ, ರಾಜಾಜಿನಗರ, ಬೆಂಗಳೂರು–10 (ರೂ.80,300/–)

(ಬಿ) ಭಾರತಿ ಬ್ಯಾಂಕ್ ನಿಯಮಿತ, ಬೆಂಗಳೂರು (ರೂ.34,000/–)

(ಸಿ) ಅಲಹಾಬಾದ್ ಬ್ಯಾಂಕ್ ಸಾಲ (ರೂ.32,000/–)

(ಡಿ) ತ್ಯಾಗರಾಜ ಸಹಕಾರಿ ಬ್ಯಾಂಕ್ ಸಾಲ (ರೂ.1,20,000/–)

ಭಾರತಿ ಸಹಕಾರ ಬ್ಯಾಂಕ್‌ನಲ್ಲಿ ಸದರಿ ನೌಕರನು ಪಡೆದುಕೊಂಡಿದ್ದ ಸಾಲಕ್ಕೆ ಸಂಬಂಧಿಸಿದಂತೆ, ನ್ಯಾಯಾಲಯದಲ್ಲಿ ಪ್ರಕರಣ ದಾಖಲಾಗಿದ್ದು, ಸದರಿ ನೌಕರನ ವಿರುದ್ಧ ನ್ಯಾಯಾಜ್ಞೆ (decree) ಆಗಿರುತ್ತದೆ. ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು, 1966ರ ನಿಯಮ 22ರಲ್ಲಿ "Insolvency and Habitual Indeptness" ಕುರಿತು "A Government servant shall so manage his private affairs as to avoid habitual indeptedness or insolvency" ಎಂದು ಸ್ಪಷ್ಟವಾಗಿ ವಿವರಿಸಿದ್ದರಿಂದ, ಸದರಿ ಸರ್ಕಾರಿ ನೌಕರನು ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು, 1966ರ ನಿಯಮ 22ಕ್ಕೆ ವಿರುದ್ಧವಾಗಿ ವರ್ತಿಸಿದ್ದು ಸ್ಪಷ್ಟವಾಗಿ ಕಂಡುಬರುತ್ತದೆ.

ಮೇಲೆ ತಿಳಿಸಲಾದ ಮಾಹಿತಿಯೊಂದಿಗೆ ಈ ಸರ್ಕಾರಿ ನೌಕರರ ಸೇವಾ ಚರಿತ್ರೆಯನ್ನು ಈ ಕೆಳಗೆ ವಿವರಿಸಲಾಗಿದೆ:

1) ಪಶು ಸಂಗೋಪನೆ ಮತ್ತು ಪಶು ವೈದ್ಯ ಸೇವಾ ಇಲಾಖೆಯಲ್ಲಿ 3 ವರ್ಷದಿಂದ ಕರ್ತವ್ಯ ನಿರ್ವಹಿಸುತ್ತಿದ್ದ ಇವರನ್ನು ಸದರಿ ನೌಕರನ "ಅನಧಿಕೃತ ಗೈರು ಹಾಜರಾತಿ" ಮತ್ತು "ಕರ್ತವ್ಯ ಲೋಪ" ಕಾರಣದಿಂದ, ಆ ಇಲಾಖೆಯ ಆದೇಶದ ದಿನಾಂಕ:28.02.2004ರಲ್ಲಿ ವರ್ಗಾವಣೆ ಆದೇಶವಿಲ್ಲದೆ ಬಿಡುಗಡೆ ಮಾಡಿರುತ್ತಾರೆ.

2) ನಂತರ ದಿನಾಂಕ:05.03.2004ರ ಆದೇಶದಲ್ಲಿ ಸಹಕಾರ ಇಲಾಖೆಯಲ್ಲಿನ ಹುದ್ದೆಗೆ ನೇಮಕಾತಿ ಮಾಡಿದ ನಂತರ ಆ ಕಛೇರಿಗೆ ಹಾಜರಾದ ಅಲ್ಪಾವಧಿಯಲ್ಲಿಯೇ "ಅನಧಿಕೃತ ಗೈರು ಹಾಜರಾತಿ, ಕರ್ತವ್ಯ ನಿರ್ವಹಣೆಯಲ್ಲಿನ ಬೇಜವಾಬ್ದಾರಿತನ" ಇತ್ಯಾದಿಗಳನ್ನು ಮುಂದುವರೆಸಿದ್ದರಿಂದ ಸಹಕಾರ ಇಲಾಖೆಯ ಆದೇಶದ ದಿನಾಂಕ:30.04.2005ರಲ್ಲಿ ಅವರನ್ನು ಸ್ವಯಂ (suo-moto-without any transfer order) ಬಿಡುಗಡೆಗೊಳಿಸಿರುತ್ತಾರೆ. **(ಆ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸಿದ ಅವಧಿ ಕೇವಲ ಒಂದು ವರ್ಷ)** ಈ ನಿರ್ದೇಶನಾಲಯದ ಆದೇಶದ ದಿನಾಂಕ:05.05.2005ರಲ್ಲಿ ಇವರನ್ನು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಬೆಂಗಳೂರು (ನಗರ) ಇಲ್ಲಿಗೆ ನೇಮಕಾತಿ ಮಾಡಲಾಗಿದ್ದು ದಿನಾಂಕ:05.05.2005 ರಿಂದ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಬೆಂಗಳೂರು (ನಗರ) ಇಲ್ಲಿ ಕರ್ತವ್ಯಕ್ಕೆ ಹಾಜರಾದ ನಂತರ ಸದರಿ ಸರ್ಕಾರಿ ನೌಕರನ ನಿರಂತರವಾದ ಅನಧಿಕೃತ ಗೈರು ಹಾಜರಾತಿ ಕಾರಣ ನೀಡಿ, ದಿನಾಂಕ:24.11.2005ರ ಆದೇಶದಲ್ಲಿ ಕರ್ತವ್ಯದಿಂದ ಬಿಡುಗಡೆಗೊಳಿಸಿದ್ದರಿಂದ ಈ ನಿರ್ದೇಶನಾಲಯದ ಆದೇಶದ ದಿನಾಂಕ:28.12.2005ರಲ್ಲಿ ಸದರಿ ಅವರನ್ನು ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ ಇಲ್ಲಿ ನೇಮಕಾತಿ ಮಾಡಲಾಗಿರುತ್ತದೆ. ಆ ಕಛೇರಿಯಲ್ಲಿ ಕೇವಲ ಒಂದು ವರ್ಷದ ಸೇವೆಯ ನಂತರ, ಆ ಕಛೇರಿಗೆ ಅವರ ಸೇವೆ "ಅಗತ್ಯವಿಲ್ಲವೆಂದು" ಆದೇಶದ ದಿನಾಂಕ:13.12.2006ರಲ್ಲಿ ಬಿಡುಗಡೆಗೊಳಿಸಿದ್ದರಿಂದ ಈ ಕಛೇರಿ ಆದೇಶದ ದಿನಾಂಕ:09.01.2007ರಲ್ಲಿ "ಕಾರ್ಮಿಕ ಇಲಾಖೆಯಲ್ಲಿ ನೇಮಕಾತಿ" ಮಾಡಲಾಗಿತ್ತು. ದಿನಾಂಕ:10.01.2007 ರಂದು ಕಾರ್ಮಿಕ ಇಲಾಖೆಯಲ್ಲಿ ಹಾಜರಾಗಿ, "ದಿನಾಂಕ:21.03.2007 ರಿಂದ ನಿರಂತರವಾಗಿ ಜೂನ್ 2007ರ ವರೆಗೆ ರಜೆಯ ಮೇಲಿರುವುದನ್ನು" ಆ ಇಲಾಖೆಯ ಪತ್ರದ ದಿನಾಂಕ:06.06.2007ರಲ್ಲಿ ಈ ಕಛೇರಿಗೆ ಮಾಹಿತಿ ನೀಡಿ ದಿನಾಂಕ:21.09.2007ರ ಆದೇಶದಲ್ಲಿ ಸದರಿ ಅವರನ್ನು ಆ ಕಛೇರಿಯಿಂದಲೂ ಬಿಡುಗಡೆ ಮಾಡಲಾಗಿತ್ತು. ದಿನಾಂಕ:09.01.2007 ರಿಂದ ದಿನಾಂಕ:21.09.2007ರ ವರೆಗೆ– ಕೇವಲ 8 ತಿಂಗಳು ಆ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸಿದ್ದರೂ, ಆ ಇಲಾಖೆಯಲ್ಲಿ ದಿನಾಂಕ:02.03.2007 ರಿಂದ ದಿನಾಂಕ:21.09.2007 ರವರೆಗೆ– 6 ತಿಂಗಳಷ್ಟು ದೀರ್ಘವಾದ ಅವಧಿಯಲ್ಲಿ ಅನಧಿಕೃತ ಗೈರು ಹಾಜರಾಗಿರುತ್ತಾರೆ.

ಈ ನಿರ್ದೇಶನಾಲಯದ ಆದೇಶದ ದಿನಾಂಕ:26.09.2007ರಲ್ಲಿ ಅವರನ್ನು ಕೋಲಾರ ಜಿಲ್ಲಾ ಪಂಚಾಯತಿಯಲ್ಲಿನ ಖಾಲಿ ಹುದ್ದೆಗೆ ನೇಮಕಾತಿ ಮಾಡಲಾಗಿದ್ದರೂ, ಅವರು ಅಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡಿಲ್ಲವಾದ್ದರಿಂದ, ದಿನಾಂಕ:04.02.2008ರಂದು "ಕಾರಣ ಕೇಳುವ ಜ್ಞಾಪನ" ನೀಡಲಾಗಿತ್ತು. ನಂತರ ಅವರ "ಸ್ವಂತ ಕೋರಿಕೆ ದಿನಾಂಕ:10.03.2008ರ ಅನ್ವಯ", ಅವರನ್ನು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ರಾಮನಗರ ಇಲ್ಲಿಗೆ ದಿನಾಂಕ:25.03.2008ರ ಆದೇಶದಲ್ಲಿ ನೇಮಕಾತಿ ಮಾಡಲಾಗಿತ್ತು.

ಒಟ್ಟಾರೆ, ಸದರಿ ಅವರ ಸರ್ಕಾರದ ಸೇವೆಯನ್ನು ಸಂಕ್ಷಿಪ್ತವಾಗಿ ವಿವರಿಸುವುದಾದಲ್ಲಿ 2004 ರಿಂದ 2008ರ ಅವರ 4 ವರ್ಷಗಳ ಸೇವಾ ಅವಧಿಯಲ್ಲಿ ಪಶುಪಾಲನಾ ಮತ್ತು ಪಶು ವೈದ್ಯ ಸೇವಾ ಇಲಾಖೆಯಿಂದ ಪ್ರಸ್ತುತ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ರಾಮನಗರ ಇಲ್ಲಿ ನೇಮಕಾತಿ ಮಾಡುವವರೆಗೆ 5(ಐದು) ವಿವಿಧ ಕಛೇರಿಗಳಲ್ಲಿ [(1)Animal Husbendary and Veternary Service; (2) Co-operation; (3) District Statistical Office, Bangalore(U); (4) Educational Department; (5) Labour Department] ನೇಮಕಾತಿ ಹೊಂದಿ, ಅನಧಿಕೃತ ಗೈರು ಹಾಜರಾತಿ, ಕರ್ತವ್ಯ ಲೋಪ ಇತ್ಯಾದಿ ಕಾರಣಗಳಿಂದ ಬಿಡುಗಡೆ ಹೊಂದಿರುತ್ತಾರೆ. ಹಾಗೂ ಜಿಲ್ಲಾ ಪಂಚಾಯತ್, ಕೋಲಾರ ಇಲ್ಲಿ ವರದಿ ಮಾಡಿಕೊಳ್ಳದೆ ದೀರ್ಘಾವಧಿ ಗೈರುಹಾಜರಾಗಿ, ನಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ರಾಮನಗರ ಇಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿದ್ದಾರೆ.

ದಿನಾಂಕ:02.03.2007 ರಿಂದ ದಿನಾಂಕ:21.09.2007ರ ವರೆಗೆ ಒಟ್ಟು 6 ತಿಂಗಳಿಗಿಂತಲೂ ಹೆಚ್ಚಿನ ಅವಧಿ ಕಾರ್ಮಿಕ ಇಲಾಖೆಯಲ್ಲಿ ಅನಧಿಕೃತ ಗೈರು ಹಾಜರಿ; ಆ ಇಲಾಖೆಯಿಂದ ಹಿಂತಿರುಗಿದ ನಂತರ, ದಿನಾಂಕ:22.09.2007 ರಿಂದ ದಿನಾಂಕ:28.03.2008ರ ವರೆಗೆ ಅನಧಿಕೃತ ಗೈರು ಹಾಜರಿ (6 ತಿಂಗಳುಗಳಿಗಿಂತಲೂ ಹೆಚ್ಚಿನ ಅವಧಿ); ಈ ದೀರ್ಘಾವಧಿ ಅನಧಿಕೃತ ಗೈರು ಹಾಜರಿಯಲ್ಲದೆ ಇನ್ನೂ ಅನೇಕ ದಿನಗಳಷ್ಟು ಅವರ ಗೈರು ಹಾಜರಾತಿ ಕುರಿತು ಮಾಹಿತಿ ಲಭ್ಯವಿದೆಯಾದ್ದರಿಂದ, ಸದರಿ ಅವರು "ಅನಧಿಕೃತ ಗೈರುಹಾಜರಾತಿ" ಪ್ರವೃತ್ತಿ ಹೊಂದಿರುತ್ತಾರೆ; ಸದರಿ ಅವರು ವೇತನ ಶ್ರೇಣಿ ರೂ.10000–18500ರ ಸಹಾಯಕ ಸಾಂಖ್ಯಿಕ ಅಧಿಕಾರಿಯ ಜವಾಬ್ದಾರಿ ಹುದ್ದೆಯನ್ನು ಹೊಂದಿದ್ದರೂ, ಅತ್ಯಂತ ಬೇಜವಾಬ್ದಾರಿ ವರ್ತನೆ ರೂಢಿಸಿಕೊಂಡಿರುತ್ತಾರೆ. ಹಾಗೂ ಸರ್ಕಾರದ ಕರ್ತವ್ಯವನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿ, ಕೇವಲ ಅವರ ವೈಯಕ್ತಿಕ ಸೇವಾ ವಿಷಯಗಳಲ್ಲಿ (ವೇತನ ನಿಗದಿ, ರಜೆ ಮಂಜೂರಾತಿ, ವಾರ್ಷಿಕ ವೇತನ ಬಡ್ತಿ ಇತ್ಯಾದಿ) ಹೆಚ್ಚಿನ ಆಸಕ್ತಿ ಹೊಂದಿರುವುದು ಕಂಡುಬರುತ್ತದೆ.

ಉಲ್ಲೇಖ (2)ರಲ್ಲಿನ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ರಾಮನಗರ ಇವರ ಪತ್ರದೊಂದಿಗೆ ಲಗತ್ತಿಸಲಾದ ಸದರಿ ಸಹಾಯಕ ಸಾಂಖ್ಯಿಕ ಅಧಿಕಾರಿಗಳಿಗೆ ನೀಡಲಾದ ಜ್ಞಾಪನಗಳ ದಿನಾಂಕ:15.05.2008, 02.07.2008, 29.07.2008, 31.07.2008, 23.08.2008, 04.10.2008 ಮತ್ತು ದಿನಾಂಕ:14.10.2008 ಗಳಲ್ಲಿ ಸದರಿ ಅವರ ಅನಧಿಕೃತ ಗೈರು ಹಾಜರಾತಿ, ಸರ್ಕಾರದ ಕರ್ತವ್ಯ ನಿರ್ವಹಣೆಯಲ್ಲಿ ಬೇಜವಾಬ್ದಾರಿತನ, ನಿರ್ಲಕ್ಷತೆ, ಕರ್ತವ್ಯ ಲೋಪ ಇತ್ಯಾದಿ ಗಂಭೀರ ಸ್ವರೂಪದ ಲೋಪದೋಷಗಳು ಮೇಲ್ನೋಟಕ್ಕೆ ಕಂಡುಬರುತ್ತಿದ್ದು, ಸದರಿ ಅವರು ಸರ್ಕಾರದ ನೌಕರರೊಬ್ಬನಿಗೆ ಸಲ್ಲದ ರೀತಿಯಲ್ಲಿನ ನಿರಂತರವಾದ ವರ್ತನೆಯನ್ನು ಪರಿಗಣಿಸಲಾಗಿ ಇವರ ವಿರುದ್ಧ ಸೂಕ್ತವಾದ ಕ್ರಮ ಜರುಗಿಸುವುದು ಅಗತ್ಯವೆಂದು ಕಂಡುಬರುತ್ತದೆ.

ಆದ್ದರಿಂದ, ಸದರಿ ಅವರು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966ರ ನಿಯಮ (3)ನ್ನು ಸಂಪೂರ್ಣವಾಗಿ ಉಲ್ಲಂಘಿಸಿದ್ದರಿಂದಲೂ, ಇತ್ತೀಚೆಗೆ ದಿನಾಂಕ:02.03.2007 ರಿಂದ ದಿನಾಂಕ:28.03.2008ರ ವರೆಗಿನ ಅವರ ಅನಧಿಕೃತ ಗೈರುಹಾಜರಾತಿ ಹಾಗೂ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ರಾಮನಗರ ಇವರು ಸದರಿ ಅವರ ವಿರುದ್ಧ ನೀಡಲಾದ ದೂರು, ಅವರ ಒಟ್ಟು ಸೇವಾ ಅವಧಿಯಲ್ಲಿ ವಿಶೇಷವಾಗಿ 2004ನೇ ಸಾಲಿನಿಂದ ಇತ್ತೀಚಿನವರೆಗೆ ಸರ್ಕಾರಿ ನೌಕರರೊಬ್ಬನಿಗೆ ಸಲ್ಲದ ರೀತಿಯ ಅವರ ವರ್ತನೆ ಇತ್ಯಾದಿಗಳನ್ನು ಪರಿಗಣಿಸಿ, ನಾಗರಿಕ ಸೇವಾ (ಸಿ.ಸಿ.ಎ.) ನಿಯಮಗಳು, 1957ರ ನಿಯಮ 11ರ ಅನ್ವಯ ಕ್ರಮ ಜರುಗಿಸುವುದನ್ನು ಕಾಯ್ದಿರಿಸಿ, ಅದೇ ನಿಯಮಗಳ ನಿಯಮ: 10(1ಎ) ರನ್ವಯ, ತಕ್ಷಣದಿಂದ ಜಾರಿಗೆ ಬರುವಂತೆ ಅವರನ್ನು ಸರ್ಕಾರದ ಸೇವೆಯಿಂದ ಅಮಾನತ್ತಿನಲ್ಲಿಡುವುದು ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಕಛೇರಿ ಆದೇಶ ಸಂಖ್ಯೆ: ಆಡಳಿತ/ 409/ 2008–09**

ಮೇಲಿನ ಪ್ರಸ್ತಾವನೆಯಲ್ಲಿ ಕೂಲಂಕುಷವಾಗಿ ವಿವರಿಸಿದ ಹಿನ್ನೆಲೆಯಲ್ಲಿ ವಿಶೇಷವಾಗಿ, ಶ್ರೀ ಆರ್. ಭಾಸ್ಕರನ್, ಸದರಿ ಸಹಾಯಕ ಸಾಂಖ್ಯಿಕ ಅಧಿಕಾರಿಗಳು ಇವರ ಅನಧಿಕೃತ ಗೈರುಹಾಜರಾತಿ ಮತ್ತು ಅಸಮರ್ಪಕ ಕರ್ತವ್ಯ ನಿರ್ವಹಣೆ ಕಾರಣಗಳಿಂದ 2004 ರಿಂದ ಬೇರೆ ಇಲಾಖೆಗಳಿಂದ ಮಾತೃ ಇಲಾಖೆಗೆ ಹಿಂತಿರುಗಿಸಿದ್ದಾಗ್ಯೂ, ಅವರ ವಿರುದ್ಧ ಯಾವುದೇ ಕ್ರಮ ಜರುಗಿಸದೆ ಸ್ಥಳೀಯವಾಗಿ ನೇಮಕಾತಿ ಆದೇಶ ನೀಡಲಾಗಿದ್ದರೂ, ಹಾಗೂ ಇತ್ತೀಚೆಗೆ ಅವರ ಕೋರಿಕೆ ಅನ್ವಯ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ರಾಮನಗರ ಜಿಲ್ಲೆ ಇಲ್ಲಿ ನೇಮಕಾತಿ ಮಾಡಲಾಗಿದ್ದರೂ, ಈ ಕಛೇರಿಯಲ್ಲಿಯೂ ಕೂಡ ನಿರಂತರವಾಗಿ ಅನಧಿಕೃತ ಗೈರುಹಾಜರಾತಿ, ದುರ್ನಡತೆ, ಕರ್ತವ್ಯಲೋಪ, ಸರ್ಕಾರದ ಕರ್ತವ್ಯ ನಿರ್ವಹಣೆಯಲ್ಲಿ ನಿರ್ಲಕ್ಷತೆ, ಬೇಜವಾಬ್ದಾರಿ ಇತ್ಯಾದಿ ಕಾರಣಗಳಿಂದ ಶ್ರೀ ಆರ್. ಭಾಸ್ಕರನ್, ಸದರಿ ಸಹಾಯಕ ಸಾಂಖ್ಯಿಕ ಅಧಿಕಾರಿಗಳು, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ರಾಮನಗರ ಜಿಲ್ಲೆ, ರಾಮನಗರ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10(i–ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಅವರ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ ಮುಂದಿನ ಆದೇಶದವರೆಗೆ ಸರ್ಕಾರದ ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

ಕರ್ನಾಟಕ ನಾಗರೀಕ ಸೇವಾ ನಿಯಮಗಳು, 1957ರ ನಿಯಮ:98(1)(ಎ) ರ ಅನ್ವಯ, ಅವರು ಅಮಾನತ್ತಿನ ಅವಧಿಯಲ್ಲಿ ಜೀವನ ನಿರ್ವಹಣಾ ಭತ್ಯೆ ಪಡೆಯಲು ಅರ್ಹರಾಗಿದ್ದರೂ, ಅದೇ ನಿಯಮಗಳ ನಿಯಮ:98(2)ರ ಅನ್ವಯ ಅಮಾನತ್ತಿನಲ್ಲಿದ್ದ ಸರ್ಕಾರಿ ನೌಕರನು ಯಾವುದೇ ಉದ್ಯೋಗದಲ್ಲಿ/ ವ್ಯವಹಾರದಲ್ಲಿ/ ವೃತ್ತಿಯಲ್ಲಿ ನಿರತರಾಗಿದ್ದಲ್ಲಿ ಹಾಗೂ ಅದೇ ನಿಯಮಗಳ ನಿಯಮ:104(2)ರ ಅನ್ವಯ ಸರ್ಕಾರಿ ನೌಕರನು ತನ್ನ ಕಛೇರಿ ಇರುವ ಸ್ಥಳದಲ್ಲಿ ವಾಸಿಸುತ್ತಿದ್ದ ಹೊರತು 98ನೇ ನಿಯಮದ ಮೇರೆಗೆ ಆತನಿಗೆ ಜೀವನ ನಿರ್ವಹಣಾ ಭತ್ಯೆಯನ್ನು ಮಂಜೂರು ಮಾಡತಕ್ಕದ್ದಲ್ಲವಾದ್ದರಿಂದ, ಸದರಿ ಸರ್ಕಾರಿ ನೌಕರನು ಆತನ ಕರ್ತವ್ಯದ ಕೇಂದ್ರಸ್ಥಾನದಿಂದ ನಿರಂತರವಾಗಿ ಅನಧಿಕೃತ ಗೈರುಹಾಜರಾಗುವ ಪ್ರವೃತ್ತಿ ಹೊಂದಿದ್ದರಿಂದ ಆತನಿಗೆ ಜೀವನ ನಿರ್ವಹಣಾ ಭತ್ಯೆಯನ್ನು ನೀಡುವ ಪೂರ್ವದಲ್ಲಿ ಮೇಲಿನ ನಿಯಮಗಳನ್ನು ಪಾಲಿಸತಕ್ಕದ್ದೆಂದು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ರಾಮನಗರ ಇವರಿಗೆ ಸೂಚಿಸಲಾಗಿದೆ.

ನಿರ್ದೇಶಕರು ಮತ್ತು
ಶಿಸ್ತು ಪ್ರಾಧಿಕಾರ.

PR-1223

**ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ಬೆಂಗಳೂರು ರವರ ಕಛೇರಿ ನಡವಳಿಗಳು**

**ಪ್ರಸ್ತಾವನೆ:**

ಶ್ರೀ ಕೆ.ಜಿ. ಶ್ರೀಕಾಂತ್ ಬಿನ್ ಗಣೇಶ್‌ರಾವ್ ನಂ.2674, 11ನೇ ಮುಖ್ಯರಸ್ತೆ, 2ನೇ ಸ್ಟೇಜ್, ರಾಜಾಜಿನಗರ, ಬೆಂಗಳೂರು ಎಂಬುವವರಿಗೆ ಈ ಕಛೇರಿಯಿಂದ ದಿನಾಂಕ:29.10.1982 ರಂದು ಸಂಖ್ಯೆ: ಎಂಎನ್‌ಸಿ/ 382/82–83 ರಂತೆ ಇವರು ಮಾಲೇರು ಜಾತಿಯವರೆಂದು ಜಾತಿ ಪ್ರಮಾಣ ಪತ್ರವನ್ನು ನೀಡಲಾಗಿತ್ತು. ಆದರೆ ಶ್ರೀ ಕೆ.ಜಿ. ಶ್ರೀಕಾಂತ್ ಬಿನ್ ಗಣೇಶ್‌ರಾವ್, ರವರು ಈ ಕಛೇರಿಯಿಂದ ಈ ಜಾತಿ ಪ್ರಮಾಣ ಪತ್ರವನ್ನು ಅವರು ಪಡೆಯುವ ಸಮಯದಲ್ಲಿ ಸರ್ಕಾರಕ್ಕೆ ತಪ್ಪು ಮಾಹಿತಿಯನ್ನು ಮತ್ತು ತಪ್ಪು ದಾಖಲೆಗಳನ್ನು ನೀಡಿರುತ್ತಾರೆಂದು ತನಿಖೆಯಿಂದ ದೃಢಪಟ್ಟಿರುತ್ತದೆ.

ಈ ರೀತಿಯಾಗಿ ಸದರಿಯವರು ತಪ್ಪು ಮಾಹಿತಿಗಳನ್ನು ನೀಡಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಾಗಿದ್ದ ಹುದ್ದೆಯನ್ನು ಮೋಸದಿಂದ ಪಡೆದಿರುವ ವಿಚಾರವು ಸಮಾಜ ಕಲ್ಯಾಣ ಇಲಾಖೆಯ ಗಮನಕ್ಕೆ ಬಂದಿರುವ ಹಿನ್ನೆಲೆಯಲ್ಲಿ ಇವರಿಗೆ ನೀಡಲಾದ ಜಾತಿ ಪ್ರಮಾಣ ಪತ್ರ ನೈಜತೆಯನ್ನು ಪತ್ತೆ ಮಾಡಲು ಜಿಲ್ಲಾಧಿಕಾರಿಗಳು ಮತ್ತು ಅಧ್ಯಕ್ಷರು, ಜಿಲ್ಲಾಜಾತಿ ಪರಿಶೀಲನಾ ಸಮಿತಿಯವರ ಅಧ್ಯಕ್ಷತೆಯಲ್ಲಿ ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್ ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ ಬೆಂಗಳೂರುರವರ ಹಾಗೂ ಇವರ ಅಧೀನದಲ್ಲಿ ಕೆಲಸ ಮಾಡುತ್ತಿರುವ ಅಧಿಕಾರಿಗಳವರಿಂದಲೂ ವಿವರವಾದ ಮತ್ತು ಕೂಲಂಕುಶವಾದ ತನಿಖೆಯನ್ನು ಜಾತಿ ಪ್ರಮಾಣ ಪತ್ರವನ್ನು ಪಡೆದವರ ಸ್ವಂತ ಗ್ರಾಮವಾದ ಕಿರಣಗೆರೆ ಗ್ರಾಮ ತೀರ್ಥಹಳ್ಳಿ ತಾಲ್ಲೂಕು ಶಿವಮೊಗ್ಗ ಇವರ ಖಾಸಾ ತಂದೆ ತಾಯಿ ಸಹೋದರ ಸಹೋದರಿಯವರ ಹೇಳಿಕೆಗಳನ್ನು ಪಡೆಯಲಾಗಿದೆ. ಗ್ರಾಮದಲ್ಲಿ ಗ್ರಾಮದ ಮಹಜರ್‌ದಾರರಿಂದಲೂ ಸಹ ಮಹಜರ್‌ನ್ನು ನಡೆಸಲಾಗಿದೆ. ಸದರಿಯವರ ತಂದೆ/ತಾಯಿ ರವರು ನೀಡಿರುವ ಹೇಳಿಕೆಯಂತೆ ಇವರು ಬ್ರಾಹ್ಮಣ ಜಾತಿಯವರೆಂದು ದೃಢಪಟ್ಟಿದೆ. ಈ ಬಗ್ಗೆ ಇವರ ತಂದೆಯವರಾದ ಶ್ರೀ ಗಣೇಶ್‌ರಾವ್ ರವರ ಹೇಳಿಕೆಯಲ್ಲಿ ಇವರು ಬ್ರಾಹ್ಮಣ ಜಾತಿಯವರೆಂದು ಗ್ರಾಮದ ಶ್ರೀ ಕೆ.ವಿ. ಗೋಪಾಲಯ್ಯ ಬಿನ್ ವೆಂಕಟಾಸುಬ್ಬಯ್ಯ, ಶ್ರೀ ಕೆ.ಎಂ. ರಾಘವೇಂದ್ರ ಹಾಗೂ ಇತರೆ ಗ್ರಾಮಸ್ಥರು ನೀಡಿರುವ ಹೇಳಿಕೆಯಂತೆ ಬ್ರಾಹ್ಮಣ ಜಾತಿಗೆ ಇವರು ಬರುತ್ತಾರೆಂದು ಹೇಳಿಕೆಗಳಿಂದ ತಿಳಿದುಬಂದಿದೆ. ಪರಿಶೀಲನೆಯಿಂದ ಇವರು ಬ್ರಾಹ್ಮಣ ಜಾತಿಯವರೆಂದು ದೃಢಪಟ್ಟಿದೆ.

ಅಂದರೆ ಸದರಿಯವರು ಈ ಕಛೇರಿಯಿಂದ ದಿನಾಂಕ:29.10.1982ರಲ್ಲಿ ಮಾಲೇರು ಎಂಬ ಜಾತಿಯವರೆಂದು ಸುಳ್ಳು ದಾಖಲೆ ಹಾಗೂ ಮಾಹಿತಿಗಳನ್ನು ನೀಡಿ ಜಾತಿ ಪ್ರಮಾಣ ಪತ್ರವನ್ನು ಪಡೆದಿದ್ದಾರೆ ಎಂದು ಖಚಿತವಾಗಿರುತ್ತದೆ ಅಲ್ಲದೆ ಸದರಿಯವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿರಿಸಿದ ಉದ್ಯೋಗವನ್ನು ಮೋಸದಿಂದ ಪಡೆದುಕೊಂಡಿದ್ದಾರೆಂದು ದೃಢಪಟ್ಟಿರುತ್ತದೆ. ಅಲ್ಲದೆ ಸದರಿಯವರಿಗೆ ಈ ಕಛೇರಿಯಿಂದ ದಿನಾಂಕ:27.03.2008 ಮತ್ತು 24.04.2008ರಂದು ಎರಡು ಸಲ ತಿಳುವಳಿಕೆ ಪತ್ರಗಳನ್ನು ನೊಂದಣಿ ಅಂಚೆ ಮೂಲಕ ಕಳುಹಿಸಿಕೊಟ್ಟಿದ್ದರೂ ಸಹ ಅವರಿಗೆ ಜಾರಿ ಆಗಿದ್ದರೂ ಸಹ ಅವರು ಇದರ ಬಗ್ಗೆ ಯಾವುದೇ ಪ್ರತಿಕ್ರಿಯೇಯನ್ನು ವ್ಯಕ್ತಪಡಿಸಿರುವುದಿಲ್ಲ.

**ಆದೇಶ**

**ಸಂಖ್ಯೆ: ಎಂಎಸ್‌ಸಿ/ಸಿಆರ್/7/2008–09, ದಿನಾಂಕ:13ನೇ ಅಕ್ಟೋಬರ್, 2008**

ಪ್ರಸ್ತಾವನೆಯಲ್ಲಿ ಉಲ್ಲೇಖದಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ಮತ್ತೊಮ್ಮೆ ಈ ಕಛೇರಿಯಿಂದ ತಿಳುವಳಿಕೆ ಪತ್ರವನ್ನು ದಿನಾಂಕ:27.03.2008 ಮತ್ತು 24.04.2008 ರಂದು ನೊಂದಣಿ ಅಂಚೆ ಮೂಲಕ ಕಳುಹಿಸಲಾಗಿದೆ. ಶ್ರೀ ಕೆ.ಜಿ. ಶ್ರೀಕಾಂತ್ ಬಿನ್ ಗಣೇಶ್‌ರಾವ್‌ರವರು ಈಗಾಗಲೇ ಈ ಕಛೇರಿಯಿಂದ ದಿನಾಂಕ:29.10.1982 ರಂದು ನೀಡಿರುವ ಮಾಲೇರು ಎಂಬ ಜಾತಿಯನ್ನು ಸಮರ್ಥಿಸಿಕೊಳ್ಳಲು ಯಾವುದೇ ಪೂರಕ ದಾಖಲೆಗಳನ್ನು ಹಾಜರ್‌ಪಡಿಸುವಲ್ಲಿ ಸಂಪೂರ್ಣವಾಗಿ ವಿಫಲರಾಗಿರುತ್ತಾರೆ. ಮತ್ತು ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ಮಟ್ಟದ ಅಧ್ಯಕ್ಷರು ಜಾತಿ ಪರಿಶೀಲನಾ ಸಮಿತಿಯವರ ಅಧ್ಯಕ್ಷತೆಯಲ್ಲಿ ತೆಗೆದುಕೊಂಡ ಪರಿಶೀಲನಾ ವರದಿಯನ್ನು ಯಥಾವತ್ತಾಗಿ ಅಂಗೀಕರಿಸಿ ಶ್ರೀ ಕೆ.ಜಿ. ಶ್ರೀಕಾಂತ್ ಬಿನ್ ಗಣೇಶ್‌ರಾವ್ ರವರಿಗೆ ಈ ಕಛೇರಿಯಿಂದ ದಿನಾಂಕ:29.10.1982 ರಂದು ನೀಡಿರುವ ಮಾಲೇರು ಎಂಬ ಜಾತಿ ಪ್ರಮಾಣ ಪತ್ರವನ್ನು ರದ್ದುಪಡಿಸಲಾಗಿದೆ.

ತಹಸೀಲ್ದಾರ್,
ಬೆಂಗಳೂರು ದಕ್ಷಿಣ ತಾಲ್ಲೂಕು,
ಬೆಂಗಳೂರು.

ಪಿ.ಆರ್.1247

**ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ಬೆಂಗಳೂರು ರವರ ಕಛೇರಿ ನಡವಳಿಗಳು**

**ಪ್ರಸ್ತಾವನೆ:**

ಶ್ರೀಮತಿ ಕೆ. ಸರಸ್ವತಿ ಬಿನ್ ಕೆ.ಸಮಲ್, ಕೋರಮಂಗಲ ಬೆಂಗಳೂರು ಎಂಬುವವರಿಗೆ ಈ ಕಛೇರಿಯಿಂದ ದಿನಾಂಕ:17.08.1990 ರಂದು ಸಂಖ್ಯೆ: ಎಂಎಸ್‌ಸಿ1074/90–91 ರಂತೆ ಇವರು ನಾಯಡ್ ಜಾತಿಯವರೆಂದು ಜಾತಿ ಪ್ರಮಾಣ ಪತ್ರವನ್ನು ನೀಡಲಾಗಿತ್ತು. ಆದರೆ ಶ್ರೀಮತಿ ಕೆ.ಸರಸ್ವತಿ ಬಿನ್ ಕೆ.ಸಮಲ್, ರವರು ಈ ಕಛೇರಿಯಿಂದ ಈ ಜಾತಿ ಪ್ರಮಾಣ ಪತ್ರ ಅವರು ಪಡೆಯುವ ಸಮಯದಲ್ಲಿ ಸರ್ಕಾರಕ್ಕೆ ತಪ್ಪು ಮಾಹಿತಿಯನ್ನು ಮತ್ತು ತಪ್ಪು ದಾಖಲೆಗಳನ್ನು ನೀಡಿರುತ್ತಾರೆಂದು ತನಿಖೆಯಿಂದ ದೃಢಪಟ್ಟಿರುತ್ತದೆ.

ಈ ರೀತಿಯಾಗಿ ಸದರಿಯವರು ತಪ್ಪು ಮಾಹಿತಿಗಳನ್ನು ನೀಡಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಾಗಿದ್ದ ಹುದ್ದೆಯನ್ನು ಮೋಸದಿಂದ ಪಡೆದಿರುವ ವಿಚಾರವು ಸಮಾಜ ಕಲ್ಯಾಣ ಇಲಾಖೆಯ ಗಮನಕ್ಕೆ ಬಂದಿರುವ ಹಿನ್ನೆಲೆಯಲ್ಲಿ ಇವರಿಗೆ ನೀಡಲಾದ ಜಾತಿ ಪ್ರಮಾಣ ಪತ್ರ ನೈಜತೆಯನ್ನು ಪತ್ತೆ ಮಾಡಲು ಜಿಲ್ಲಾಧಿಕಾರಿಗಳು ಮತ್ತು ಅಧ್ಯಕ್ಷರು,

ಜಿಲ್ಲಾಜಾತಿ ಪರಿಶೀಲನಾ ಸಮಿತಿಯವರ ಅಧ್ಯಕ್ಷತೆಯಲ್ಲಿ ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್ ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ ಬೆಂಗಳೂರುರವರ ಹಾಗೂ ಇವರ ಅಧೀನದಲ್ಲಿ ಕೆಲಸ ಮಾಡುತ್ತಿರುವ ಅಧಿಕಾರಿಗಳವರಿಂದಲೂ ವಿವರವಾದ ಮತ್ತು ಕೂಲಂಕುಶವಾದ ತನಿಖೆಯನ್ನು ಜಾತಿ ಪ್ರಮಾಣ ಪತ್ರವನ್ನು ಪಡೆದವರ ಸ್ವಂತ ಗ್ರಾಮವಾದ ದೊಮ್ಮಲೂರು ಕಿಷ್ಣರಾಜಪುರ ಮನೆ ನಂ.8, 3ನೇ ಮುಖ್ಯರಸ್ತೆ, ರ ಖಾಸಾ ತಂದೆ, ತಾಯಿ, ಸಹೋದರ, ಸಹೋದರಿಯವರ ಹೇಳಿಕೆಗಳನ್ನು ಪಡೆಯಲಾಗಿದೆ. ಗ್ರಾಮದಲ್ಲಿ ಗ್ರಾಮದ ಮಹಜರ್‌ದಾರರಿಂದಲೂ ಸಹ ಮಹಜರ್‌ನ್ನು ನಡೆಸಲಾಗಿದೆ. ಸದರಿಯವರ ತಂದೆ/ ತಾಯಿ ರವರು ನೀಡಿರುವ ಹೇಳಿಕೆಯಂತೆ ಇವರು ನಾಯಡ್ ಜಾತಿಯವರೆಂದು ದೃಢಪಟ್ಟಿದೆ. ಈ ಬಗ್ಗೆ ಇವರ ಶಾಲಾ ದಾಖಲೆಗಳಾದ ವರ್ಗಾವಣೆ ಪತ್ರದ ಸಂಖ್ಯೆ: 5/82–83, ಟಿಸಿ ನಂ.41/85–86 ಗಳಲ್ಲಿರುವ ದಾಖಲೆಯಂತೆ ಸದರಿಯವರು ಹಿಂದೂ ಜಾತಿಯವರೆಂದು ದೃಢಪಟ್ಟಿರುತ್ತದೆ. ಆದರೆ ನಾಯಡ್ ಎಂಬ ಜಾತಿಯು ಕರ್ನಾಟಕದಲ್ಲಿ ಪರಿಶಿಷ್ಟ ಜಾತಿ ಎಂದು ಸರ್ಕಾರದಿಂದ ಅಧಿಸೂಚನೆ ಹೊರಡಿಸಲ್ಪಟ್ಟಿಲ್ಲ.

ಅಂದರೆ ಸದರಿಯವರು ಈ ಕಛೇರಿಯಿಂದ ದಿನಾಂಕ:17.08.1990ರಲ್ಲಿ ನಾಯಡ್ ಎಂಬ ಜಾತಿಯವರೆಂದು ಸುಳ್ಳು ದಾಖಲೆ ಹಾಗೂ ಮಾಹಿತಿಗಳನ್ನು ನೀಡಿ ಜಾತಿ ಪ್ರಮಾಣ ಪತ್ರವನ್ನು ಪಡೆದಿದ್ದಾರೆ ಎಂದು ಖಚಿತವಾಗಿರುತ್ತದೆ ಅಲ್ಲದೆ ಸದರಿಯವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿರಿಸಿದ ಉದ್ಯೋಗವನ್ನು ಮೋಸದಿಂದ ಪಡೆದುಕೊಂಡಿದ್ದಾರೆಂದು ದೃಢಪಟ್ಟಿರುತ್ತದೆ. ಅಲ್ಲದೆ ಸದರಿಯವರಿಗೆ ಈ ಕಛೇರಿಯಿಂದ ದಿನಾಂಕ:27.03.2008 ಮತ್ತು 24.04.2008 ರಂದು ಎರಡು ಸಲ ತಿಳುವಳಿಕೆ ಪತ್ರಗಳನ್ನು ನೀಡಿದ ನಂತರ ಸ್ವಯಂ ಪ್ರೇರಣೆಯಿಂದ ದಿನಾಂಕ:20.03.2008ರಲ್ಲಿ ನೋಟರಿಯವರ ಮುಂದೆ ಸಹಿ ಮಾಡಿದ ಪ್ರಮಾಣಪತ್ರವನ್ನು ಹಾಜರ್‌ಪಡಿಸಿ ಅವರು ನಯಾದಿ ಜಾತಿಗೆ ಸೇರಿದವರೆಂದು ತಿಳಿಸಿದ್ದಾರೆ. ಇದು ಈಗಾಗಲೇ ಸುಳ್ಳು ದಾಖಲೆಗಳೆಂದು ಸಾಬೀತಾಗಿರುತ್ತದೆ.

**ಆದೇಶ ಸಂಖ್ಯೆ: ಎಂಎಸ್‌ಸಿ/ ಸಿಆರ್/8/2008–09, ದಿನಾಂಕ:13ನೇ ಅಕ್ಟೋಬರ್, 2008**

ಪ್ರಸ್ತಾವನೆಯಲ್ಲಿ ಉಲ್ಲೇಖದಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ಮತ್ತೊಮ್ಮೆ ಈ ಕಛೇರಿಯಿಂದ ತಿಳುವಳಿಕೆ ಪತ್ರವನ್ನು ದಿನಾಂಕ:22.05.2008ರಲ್ಲಿ ನೊಂದಣಿ ಅಂಚೆ ಮೂಲಕ ಕಳುಹಿಸಲಾಗಿದೆ. ಶ್ರೀಮತಿ ಕೆ. ಸರಸ್ವತಿ ಬಿನ್ ಕೆ. ಸಮಲ್ ರವರು ಈಗಾಗಲೇ ಈ ಕಛೇರಿಯಿಂದ ದಿನಾಂಕ:17.08.1990 ರಂದು ನೀಡಿರುವ ನಾಯಡ್ ಎಂಬ ಜಾತಿಯನ್ನು ಸಮರ್ಥಿಸಿಕೊಳ್ಳಲು ಯಾವುದೇ ಪೂರಕ ದಾಖಲೆಗಳನ್ನು ಹಾಜರ್‌ಪಡಿಸುವಲ್ಲಿ ಸಂಪೂರ್ಣವಾಗಿ ವಿಫಲರಾಗಿರುತ್ತಾರೆ. ಮತ್ತು ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ಮಟ್ಟದ ಅಧ್ಯಕ್ಷರು ಜಾತಿ ಪರಿಶೀಲನಾ ಸಮಿತಿಯವರ ಅಧ್ಯಕ್ಷತೆಯಲ್ಲಿ ತೆಗೆದುಕೊಂಡ ಪರಿಶೀಲನಾ ವರದಿಯನ್ನು ಯಥಾವತ್ತಾಗಿ ಅಂಗೀಕರಿಸಿ ಶ್ರೀಮತಿ ಕೆ. ಸರಸ್ವತಿ ಬಿನ್ ಕೆ.ಸಮಲ್ ರವರಿಗೆ ಈ ಕಛೇರಿಯಿಂದ ದಿನಾಂಕ:17.08.1990 ರಂದು ನೀಡಿರುವ ನಾಯಡ್ ಎಂಬ ಜಾತಿ ಪ್ರಮಾಣ ಪತ್ರವನ್ನು ರದ್ದುಪಡಿಸಲಾಗಿದೆ.

ತಹಸೀಲ್ದಾರ್,<br>
ಬೆಂಗಳೂರು ದಕ್ಷಿಣ ತಾಲ್ಲೂಕು,<br>
ಬೆಂಗಳೂರು.

ಪಿ.ಆರ್.1248

**ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ಬೆಂಗಳೂರು ರವರ ಕಛೇರಿ ನಡವಳಿಗಳು**

**ಪ್ರಸ್ತಾವನೆ:**

ಶ್ರೀ ಬಿ. ಪ್ರವೀಣ್‌ಕುಮಾರ್ ಬಿನ್ ಬಿ.ನಾರಾಯಣರಾವ್, ನಂ.25, ಕೆನರಾಬ್ಯಾಂಕ್ ಕಾಲೋನಿ, 4ನೇ ಬ್ಲಾಕ್, ಜಯನಗರ, ಬೆಂಗಳೂರು–11 ಎಂಬುವವರಿಗೆ ಈ ಕಛೇರಿಯಿಂದ ದಿನಾಂಕ:17.08.1984 ರಂದು ಇವರು ಕೋಟಿಗಾರ್ ಜಾತಿಯವರೆಂದು ಜಾತಿ ಪ್ರಮಾಣ ಪತ್ರವನ್ನು ನೀಡಲಾಗಿತ್ತು. ಆದರೆ ಶ್ರೀ ಬಿ. ಪ್ರವೀಣ್‌ಕುಮಾರ್ ಬಿನ್ ಬಿ. ನಾರಾಯಣರಾವ್, ರವರು ಈ ಕಛೇರಿಯಿಂದ ಈ ಜಾತಿ ಪ್ರಮಾಣ ಪತ್ರವನ್ನು ಅವರು ಪಡೆಯುವ ಸಮಯದಲ್ಲಿ ಸರ್ಕಾರಕ್ಕೆ ತಪ್ಪು ಮಾಹಿತಿಯನ್ನು ಮತ್ತು ತಪ್ಪು ದಾಖಲೆಗಳನ್ನು ನೀಡಿರುತ್ತಾರೆಂದು ತನಿಖೆಯಿಂದ ದೃಢಪಟ್ಟಿರುತ್ತದೆ.

ಈ ರೀತಿಯಾಗಿ ಸದರಿಯವರು ತಪ್ಪು ಮಾಹಿತಿಗಳನ್ನು ನೀಡಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಾಗಿದ್ದ ಹುದ್ದೆಯನ್ನು ಮೋಸದಿಂದ ಪಡೆದಿರುವ ವಿಚಾರವು ಸಮಾಜ ಕಲ್ಯಾಣ ಇಲಾಖೆಯ ಗಮನಕ್ಕೆ ಬಂದಿರುವ ಹಿನ್ನೆಲೆಯಲ್ಲಿ ಇವರಿಗೆ ನೀಡಲಾದ ಜಾತಿ ಪ್ರಮಾಣ ಪತ್ರ ನೈಜತೆಯನ್ನು ಪತ್ತೆ ಮಾಡಲು ಜಿಲ್ಲಾಧಿಕಾರಿಗಳು ಮತ್ತು ಅಧ್ಯಕ್ಷರು, ಜಿಲ್ಲಾಜಾತಿ ಪರಿಶೀಲನಾ ಸಮಿತಿಯವರ ಅಧ್ಯಕ್ಷತೆಯಲ್ಲಿ ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್ ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ ಬೆಂಗಳೂರುರವರ ಹಾಗೂ ಇವರ ಅಧೀನದಲ್ಲಿ ಕೆಲಸ ಮಾಡುತ್ತಿರುವ ಅಧಿಕಾರಿಗಳವರಿಂದಲೂ ವಿವರವಾದ ಮತ್ತು ಕೂಲಂಕುಶವಾದ ತನಿಖೆಯನ್ನು ಜಾತಿ ಪ್ರಮಾಣ ಪತ್ರವನ್ನು ಪಡೆದವರು ಮೂಲತಃ ಮಂಗಳೂರು ಜಿಲ್ಲೆ ಅತ್ತಾವರದಮಿತ್ತ, ಮುಗೇರು ಜಿಲ್ಲೆ, ಹಾಲಿ ಬೆಂಗಳೂರುನಲ್ಲಿ ನಂ.14, 4ನೇ ಮುಖ್ಯರಸ್ತೆ, ಟಾಟಾಶಿಲ್ಕಫಾರಂ, ಅಶೋಕ

ಮಾರ್ಬಲ್ಸ್ ಎದುರುಗಡೆಯಲ್ಲಿರುವ ಇವರ ಖಾಸಾ ತಂದೆ ತಾಯಿ ಸಹೋದರ ಸಹೋದರಿಯವರ ಹೇಳಿಕೆಗಳನ್ನು ಪಡೆಯಲಾಗಿದೆ. ಗ್ರಾಮದಲ್ಲಿ ಗ್ರಾಮದ ಮಹಜರ್‌ದಾರರಿಂದಲೂ ಸಹ ಮಹಜರ್‌ನ್ನು ನಡೆಸಲಾಗಿದೆ. ಸದರಿಯವರ ತಂದೆ/ತಾಯಿ ರವರು ನೀಡಿರುವ ಹೇಳಿಕೆಯಂತೆ ಇವರು ಕೋಟೆಗಾರ್ ಜಾತಿಯವರೆಂದು ಹೇಳಿಕೆ ನೀಡಿದ್ದರೂ ಇವರ ಶಾಲಾ ದಾಖಲೆಗಳಾದ 1) ಪದವೀಧರ ಮುಖ್ಯ ಶಿಕ್ಷಕರು, ಸರ್ಕಾರಿ ಕನ್ನಡ, ಬಾಲಕರ ಮಾದರಿ ಪಾಠಶಾಲೆ, ಚಾಮರಾಜ್‌ಪೇಟೆ ರವರು 2) ಹೆಡ್‌ಮಾಸ್ಟರ್, ಬೆಂಗಳೂರು ಹೈಯರ್ ಸೆಕೆಂಡರ್ ಸ್ಕೂಲ್ ಬೆಂಗಳೂರು ರವರುಗಳು ನೀಡಿರುವ ದಾಖಲೆಗಳ ಪ್ರಕಾರ ಇವರು ಹಿಂದು ಬ್ರಾಹ್ಮಿನ್ ಎಂದು ಖಚಿತವಾಗಿ ದೃಢಪಟ್ಟಿದೆ.

ಅಂದರೆ ಸದರಿಯವರು ಈ ಕಛೇರಿಯಿಂದ ದಿನಾಂಕ:17.08.1984 ರಲ್ಲಿ ಕೋಟೆಗಾರ್ ಎಂಬ ಜಾತಿಯವರೆಂದು ಸುಳ್ಳು ದಾಖಲೆ ಹಾಗೂ ಮಾಹಿತಿಗಳನ್ನು ನೀಡಿ ಜಾತಿ ಪ್ರಮಾಣ ಪತ್ರವನ್ನು ಪಡೆದಿದ್ದಾರೆ ಎಂದು ಖಚಿತವಾಗಿರುತ್ತದೆ ಅಲ್ಲದೆ ಸದರಿಯವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿರಿಸಿದ ಉದ್ಯೋಗವನ್ನು ಮೋಸದಿಂದ ಪಡೆದುಕೊಂಡಿದ್ದಾರೆಂದು ದೃಢಪಟ್ಟಿರುತ್ತದೆ. ಅಲ್ಲದೆ ಸದರಿಯವರಿಗೆ ಈ ಕಛೇರಿಯಿಂದ ದಿನಾಂಕ:27.03.2008 ಮತ್ತು 24.04.2008ರಂದು ಎರಡು ಸಲ ತಿಳುವಳಿಕೆ ಪತ್ರಗಳನ್ನು ನೊಂದಣಿ ಅಂಚೆ ಮೂಲಕ ಕಳುಹಿಸಿಕೊಟ್ಟಿದ್ದರೂ ತಿಳುವಳಿಕೆ ಪತ್ರ ಜಾರಿ ಆಗಿದ್ದರೂ ಸಹ ಅವರು ಇದರ ಯಾವುದೇ ಪ್ರತಿಕ್ರಿಯೇಯನ್ನು ವ್ಯಕ್ತಪಡಿಸಿರುವುದಿಲ್ಲ.

**ಆದೇಶ**

**ಸಂಖ್ಯೆ: ಎಂಎಸ್‌ಸಿ/ ಸಿಆರ್/11/2008–09, ದಿನಾಂಕ:13ನೇ ಅಕ್ಟೋಬರ್, 2008**

ಪ್ರಸ್ತಾವನೆಯಲ್ಲಿ ಉಲ್ಲೇಖದಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ಮತ್ತೊಮ್ಮೆ ಈ ಕಛೇರಿಯಿಂದ ತಿಳುವಳಿಕೆ ಪತ್ರವನ್ನು ದಿನಾಂಕ:27.03.2008 ಮತ್ತು 24.04.2008ರಂದು ನೊಂದಣಿ ಅಂಚೆ ಮೂಲಕ ಕಳುಹಿಸಲಾಗಿದೆ. ಶ್ರೀ ಬಿ. ಪ್ರವೀಣ್‌ಕುಮಾರ್ ಬಿನ್ ಬಿ. ನಾರಾಯಣರಾವ್, ರವರು ಈಗಾಗಲೇ ಈ ಕಛೇರಿಯಿಂದ ದಿನಾಂಕ:17.08.1984 ರಂದು ನೀಡಿರುವ ಕೋಟೆಗಾರ್ ಎಂಬ ಜಾತಿಯನ್ನು ಸಮರ್ಥಿಸಿಕೊಳ್ಳಲು ಯಾವುದೇ ಪೂರಕ ದಾಖಲೆಗಳನ್ನು ಹಾಜರ್‌ಪಡಿಸುವಲ್ಲಿ ಸಂಪೂರ್ಣವಾಗಿ ವಿಫಲರಾಗಿರುತ್ತಾರೆ. ಮತ್ತು ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ಮಟ್ಟದ ಅಧ್ಯಕ್ಷರು ಜಾತಿ ಪರಿಶೀಲನಾ ಸಮಿತಿಯವರ ಅಧ್ಯಕ್ಷತೆಯಲ್ಲಿ ತೆಗೆದುಕೊಂಡ ಪರಿಶೀಲನಾ ವರದಿಯನ್ನು ಯಥಾವತ್ತಾಗಿ ಅಂಗೀಕರಿಸಿ ಶ್ರೀ ಬಿ.ಪ್ರವೀಣ್‌ಕುಮಾರ್ ಬಿನ್ ಬಿ. ನಾರಾಯಣರಾವ್, ರವರಿಗೆ ಈ ಕಛೇರಿಯಿಂದ ದಿನಾಂಕ:17.08.1984 ರಂದು ನೀಡಿರುವ ಕೋಟೆಗಾರ್ ಎಂಬ ಜಾತಿ ಪ್ರಮಾಣ ಪತ್ರವನ್ನು ರದ್ದುಪಡಿಸಲಾಗಿದೆ.

ತಹಸೀಲ್ದಾರ್,
ಬೆಂಗಳೂರು ದಕ್ಷಿಣ ತಾಲ್ಲೂಕು,
ಬೆಂಗಳೂರು.

ಪಿ.ಆರ್.1249

**ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ಬೆಂಗಳೂರು ರವರ ಕಛೇರಿ ನಡವಳಿಗಳು**

**ಪ್ರಸ್ತಾವನೆ:**

ಶ್ರೀ ಡಿ. ರಾಮಣ್ಣ ಬಿನ್ ನಾಗಯ್ಯ (ಮೂಲತಃ ಡಿ. ರಾಮಣ್ಣ ಎಂಬುವುದು ಕಲ್ಪಿತ ಹೆಸರು ಮುಸಲಯ್ಯ ಎಂಬುವುದು ನಿಜವಾದ ಹೆಸರೆಂದು ವಿಚಾರಣೆಯಿಂದ ತಿಳಿದು ಬಂದಿದೆ) ಎಂಬುವವರಿಗೆ ಈ ಕಛೇರಿಯಿಂದ ದಿನಾಂಕ:21.02.1975 ರಂದು ಸಂಖ್ಯೆ: 1191 (ಸಿಆರ್) 26 ರಂತೆ ಇವರು ಆದಿಆಂದ್ರ ಜಾತಿಯವರೆಂದು ಜಾತಿ ಪ್ರಮಾಣ ಪತ್ರವನ್ನು ನೀಡಲಾಗಿತ್ತು. ಆದರೆ ಶ್ರೀ ಡಿ.ರಾಮಣ್ಣ ಅಲಿಯಾಸ್ ಮುಸಲಯ್ಯ ಬಿನ್ ನಾಗಯ್ಯ ರವರು ಈ ಕಛೇರಿಯಿಂದ ಈ ಜಾತಿ ಪ್ರಮಾಣ ಪತ್ರವನ್ನು ಅವರು ಪಡೆಯುವ ಸಮಯದಲ್ಲಿ ಸರ್ಕಾರಕ್ಕೆ ತಪ್ಪು ಮಾಹಿತಿಯನ್ನು ಮತ್ತು ತಪ್ಪು ದಾಖಲೆಗಳನ್ನು ನೀಡಿರುತ್ತಾರೆಂದು ತನಿಖೆಯಿಂದ ದೃಢಪಟ್ಟಿರುತ್ತದೆ.

ಈ ರೀತಿಯಾಗಿ ಸದರಿಯವರು ತಪ್ಪು ಮಾಹಿತಿಗಳನ್ನು ನೀಡಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಾಗಿದ್ದ ಹುದ್ದೆಯನ್ನು ಮೋಸದಿಂದ ಪಡೆದಿರುವ ವಿಚಾರವು ಸಮಾಜ ಕಲ್ಯಾಣ ಇಲಾಖೆಯ ಗಮನಕ್ಕೆ ಬಂದಿರುವ ಹಿನ್ನೆಲೆಯಲ್ಲಿ ಇವರಿಗೆ ನೀಡಲಾದ ಜಾತಿ ಪ್ರಮಾಣ ಪತ್ರ ನೈಜತೆಯನ್ನು ಪತ್ತೆ ಮಾಡಲು ಜಿಲ್ಲಾಧಿಕಾರಿಗಳು ಮತ್ತು ಅಧ್ಯಕ್ಷರು, ಜಿಲ್ಲಾಜಾತಿ ಪರಿಶೀಲನಾ ಸಮಿತಿಯವರ ಅಧ್ಯಕ್ಷತೆಯಲ್ಲಿ ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್ ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ ಬೆಂಗಳೂರುರವರ ಹಾಗೂ ಇವರ ಅಧೀನದಲ್ಲಿ ಕೆಲಸ ಮಾಡುತ್ತಿರುವ ಅಧಿಕಾರಿಗಳವರಿಂದಲೂ ವಿವರವಾದ ಮತ್ತು ಕೂಲಂಕುಶವಾದ ತನಿಖೆಯನ್ನು ಜಾತಿ ಪ್ರಮಾಣ ಪತ್ರವನ್ನು ಪಡೆದವರು ಸ್ವಂತ ಗ್ರಾಮವಾದ ಆಂಧ್ರಪ್ರದೇಶದ ನೆಲ್ಲೂರು ಜಿಲ್ಲೆ, ಉದಯಗಿರಿ ತಾಲ್ಲೂಕು ಶೆಟ್ಟಿಸಮುದ್ರ ಗ್ರಾಮದ ಇವರ ಖಾಸಾ ತಂದೆ ತಾಯಿ ಸಹೋದರ ಸಹೋದರಿಯವರ ಹೇಳಿಕೆಗಳನ್ನು ಪಡೆಯಲಾಗಿದೆ. ಗ್ರಾಮದಲ್ಲಿ ಗ್ರಾಮದ ಮಹಜರ್‌ದಾರರಿಂದಲೂ ಸಹ ಮಹಜರ್‌ನ್ನು ನಡೆಸಲಾಗಿದೆ. ಸದರಿಯವರ ತಂದೆ/ತಾಯಿ ರವರು ನೀಡಿರುವ ಹೇಳಿಕೆಯಂತೆ ಇವರು ರೆಡ್ಡಿ ಜಾತಿಯವರೆಂದು ದೃಢಪಟ್ಟಿದೆ.

ಈ ಬಗ್ಗೆ ಇವರೇ ಸ್ವಯಂ ಹೇಳಿಕೆ ನೀಡಿರುವಂತೆ ಇವರ ಸಂಬಂಧಿಕರಾದ ಸುಬ್ಬರಾಯುಡು, ಡಿ. ಕೃಷ್ಣರೆಡ್ಡಿ, ಹೆಂಡತಿಯಾದ ರುಕ್ಮಿಣಿಯಮ್ಮ ಮತ್ತು ಗ್ರಾಮದ ಮಹಜರ್‌ದಾರರು ತಿಳಿಸಿರುವಂತೆ ಡಿ.ರಾಮಣ್ಣ ಅಲಿಯಾಸ್ ಮುಸಲಯ್ಯ ಬಿನ್ ನಾಗಯ್ಯ ಎಂಬುವವರು ರೆಡ್ಡಿ ಜಾತಿಯವರಾಗಿರುತ್ತಾರೆ.

ಅಂದರೆ ಸದರಿಯವರು ಈ ಕಛೇರಿಯಿಂದ ದಿನಾಂಕ:21.02.1975 ರಲ್ಲಿ ಆದಿ ಆಂದ್ರ ಎಂಬ ಜಾತಿಯವರೆಂದು ಸುಳ್ಳು ದಾಖಲೆ ಹಾಗೂ ಮಾಹಿತಿಗಳನ್ನು ನೀಡಿ ಜಾತಿ ಪ್ರಮಾಣ ಪತ್ರವನ್ನು ಪಡೆದಿದ್ದಾರೆ ಎಂದು ಖಚಿತವಾಗಿರುತ್ತದೆ ಅಲ್ಲದೆ ಸದರಿಯವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿರಿಸಿದ ಉದ್ಯೋಗವನ್ನು ಮೋಸದಿಂದ ಪಡೆದುಕೊಂಡಿದ್ದಾರೆಂದು ದೃಢಪಟ್ಟಿರುತ್ತದೆ. ಅಲ್ಲದೇ ಸದರಿಯವರಿಗೆ ಈ ಕಛೇರಿಯಿಂದ ದಿನಾಂಕ:27.03.2008 ಮತ್ತು 24.04.2008ರಂದು ಎರಡು ಸಲ ತಿಳುವಳಿಕೆ ಪತ್ರಗಳನ್ನು ನೊಂದಣಿ ಅಂಚೆ ಮೂಲಕ ಕಳುಹಿಸಿಕೊಟ್ಟಿದ್ದರೂ ತಿಳುವಳಿಕೆ ಪತ್ರ ಜಾರಿ ಆಗಿದ್ದರೂ ಸಹ ಅವರು ಇದಕ್ಕೆ ಯಾವುದೇ ಪ್ರತಿಕ್ರಿಯೇಯನ್ನು ವ್ಯಕ್ತಪಡಿಸಿರುವುದಿಲ್ಲ.

**ಆದೇಶ**

**ಸಂಖ್ಯೆ: ಎಂಎಸ್‌ಸಿ/ಸಿಆರ್/12/2008-09, ದಿನಾಂಕ:13ನೇ ಅಕ್ಟೋಬರ್, 2008**

ಪ್ರಸ್ತಾವನೆಯಲ್ಲಿ ಉಲ್ಲೇಖದಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ಮತ್ತೊಮ್ಮೆ ಈ ಕಛೇರಿಯಿಂದ ತಿಳುವಳಿಕೆ ಪತ್ರವನ್ನು ದಿನಾಂಕ:27.03.2008 ಮತ್ತು 24.04.2008ರಂದು ನೊಂದಣಿ ಅಂಚೆ ಮೂಲಕ ಕಳುಹಿಸಲಾಗಿದೆ. ಶ್ರೀ ಡಿ. ರಾಮಣ್ಣ ಅಲಿಯಾಸ್ ಮುಸಲಯ್ಯ ಬಿನ್ ನಾಗಯ್ಯರವರು ಈಗಾಗಲೇ ಈ ಕಛೇರಿಯಿಂದ ದಿನಾಂಕ:21.02.1975 ರಂದು ನೀಡಿರುವ ಆದಿಆಂದ್ರ ಎಂಬ ಜಾತಿಯನ್ನು ಸಮರ್ಥಿಸಿಕೊಳ್ಳಲು ಯಾವುದೇ ಪೂರಕ ದಾಖಲೆಗಳನ್ನು ಹಾಜರ್‌ಪಡಿಸುವಲ್ಲಿ ಸಂಪೂರ್ಣವಾಗಿ ವಿಫಲರಾಗಿರುತ್ತಾರೆ. ಮತ್ತು ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ಮಟ್ಟದ ಅಧ್ಯಕ್ಷರು ಜಾತಿ ಪರಿಶೀಲನಾ ಸಮಿತಿಯವರ ಅಧ್ಯಕ್ಷತೆಯಲ್ಲಿ ತೆಗೆದುಕೊಂಡ ಪರಿಶೀಲನಾ ವರದಿಯನ್ನು ಯಥಾವತ್ತಾಗಿ ಅಂಗೀಕರಿಸಿ, ಶ್ರೀ ಡಿ. ರಾಮಣ್ಣ ಅಲಿಯಾಸ್ ಮುಸಲಯ್ಯ ಬಿನ್ ನಾಗಯ್ಯರವರಿಗೆ ಈ ಕಛೇರಿಯಿಂದ ದಿನಾಂಕ:21.02.1975 ರಂದು ನೀಡಿರುವ ಆದಿಆಂದ್ರ ಎಂಬ ಜಾತಿ ಪ್ರಮಾಣ ಪತ್ರವನ್ನು ರದ್ದುಪಡಿಸಲಾಗಿದೆ.

ತಹಸೀಲ್ದಾರ್,
ಬೆಂಗಳೂರು ದಕ್ಷಿಣ ತಾಲ್ಲೂಕು,
ಬೆಂಗಳೂರು.

ಪಿ.ಆರ್.1250

**ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು ಬೆಂಗಳೂರು ರವರ ಕಛೇರಿ ನಡವಳಿಗಳು**

**ಪ್ರಸ್ತಾವನೆ:**

ಶ್ರೀ ಗಣಪತಿ ಎಸ್. ಬಿನ್ ಸುಬ್ಬಯ್ಯ ನಂ.141, ಜಿಬಿಎಸ್ 6ನೇ ಅಡ್ಡರಸ್ತೆ, ಮಾರತ್‌ಹಳ್ಳಿ, ಬೆಂಗಳೂರು-37 ಎಂಬುವವರಿಗೆ ಈ ಕಛೇರಿಯಿಂದ ದಿನಾಂಕ:24.06.1993 ರಂದು ಸಂಖ್ಯೆ ಎಂಎಸ್‌ಸಿ(ಯು) 1635/93-94 ರಂತೆ ಇವರು ಮಾಲೇರು ಜಾತಿಯವರೆಂದು ಜಾತಿ ಪ್ರಮಾಣ ಪತ್ರವನ್ನು ನೀಡಲಾಗಿತ್ತು. ಆದರೆ ಶ್ರೀ ಗಣಪತಿ ಎಸ್. ಬಿನ್ ಸುಬ್ಬಯ್ಯ ರವರು ಈ ಕಛೇರಿಯಿಂದ ಈ ಜಾತಿ ಪ್ರಮಾಣ ಪತ್ರವನ್ನು ಅವರು ಪಡೆಯುವ ಸಮಯದಲ್ಲಿ ಸರ್ಕಾರಕ್ಕೆ ತಪ್ಪು ಮಾಹಿತಿಯನ್ನು ಮತ್ತು ತಪ್ಪು ದಾಖಲೆಗಳನ್ನು ನೀಡಿರುತ್ತಾರೆಂದು ತನಿಖೆಯಿಂದ ದೃಢಪಟ್ಟಿರುತ್ತದೆ.

ಈ ರೀತಿಯಾಗಿ ಸದರಿಯವರು ತಪ್ಪು ಮಾಹಿತಿಗಳನ್ನು ನೀಡಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಾಗಿದ್ದ ಹುದ್ದೆಯನ್ನು ಮೋಸದಿಂದ ಪಡೆದಿರುವ ವಿಚಾರವು ಸಮಾಜ ಕಲ್ಯಾಣ ಇಲಾಖೆಯ ಗಮನಕ್ಕೆ ಬಂದಿರುವ ಹಿನ್ನೆಲೆಯಲ್ಲಿ ಇವರಿಗೆ ನೀಡಲಾದ ಜಾತಿ ಪ್ರಮಾಣ ಪತ್ರ ನೈಜತೆಯನ್ನು ಪತ್ತೆ ಮಾಡಲು ಜಿಲ್ಲಾಧಿಕಾರಿಗಳು ಮತ್ತು ಅಧ್ಯಕ್ಷರು, ಜಿಲ್ಲಾಜಾತಿ ಪರಿಶೀಲನಾ ಸಮಿತಿಯವರ ಅಧ್ಯಕ್ಷತೆಯಲ್ಲಿ ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್ ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ, ಬೆಂಗಳೂರುರವರ ಹಾಗೂ ಇವರ ಅಧೀನದಲ್ಲಿ ಕೆಲಸ ಮಾಡುತ್ತಿರುವ ಅಧಿಕಾರಿಗಳವರಿಂದಲೂ ವಿವರವಾದ ಮತ್ತು ಕೂಲಂಕುಶವಾದ ತನಿಖೆಯನ್ನು ಜಾತಿ ಪ್ರಮಾಣ ಪತ್ರವನ್ನು ಪಡೆದವರು ಸ್ವಂತ ಗ್ರಾಮವಾದ ಕೆಪ್ಪಿಗೆ ಗ್ರಾಮ, ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ ಇವರ ಖಾಸಾ ತಂದೆ/ತಾಯಿ ಸಹೋದರ/ ಸಹೋದರಿಯವರ ಹೇಳಿಕೆಗಳನ್ನು ಪಡೆಯಲಾಗಿದೆ. ಗ್ರಾಮದಲ್ಲಿ ಗ್ರಾಮದ ಮಹಜರ್‌ದಾರರಿಂದಲೂ ಸಹ ಮಹಜರ್‌ನ್ನು ನಡೆಸಲಾಗಿದೆ. ಸದರಿಯವರ ತಂದೆ/ತಾಯಿ ರವರು ನೀಡಿರುವ ಹೇಳಿಕೆಯಂತೆ ಇವರು ಬ್ರಾಹ್ಮಣ ಜಾತಿಯವರೆಂದು ದೃಢಪಟ್ಟಿದೆ. ಈ ಬಗ್ಗೆ ಇವರ ತಂದೆ ತಾಯಿಯವರಾದ ಶ್ರೀಮತಿ ರಾಧಮ್ಮ ಇವರ ಖಾಸಾ ಅಣ್ಣನಾದ ಶ್ರೀ ಕಮಲಾಕರ್, ತಮ್ಮನಾದ ಶ್ರೀ ಎಸ್. ಶ್ರೀಕಾಂತ್ ಮತ್ತು ಗ್ರಾಮದ ಹಿರಿಯರು, ಗ್ರಾಮಸ್ಥರು ದಿನಾಂಕ:23.10.2003ರಲ್ಲಿ ನೀಡಿರುವ ಹೇಳಿಕೆಗಳ ಪ್ರಕಾರ ಮತ್ತು ಕಮಲಾಕರ್ ರವರ ಟಿ.ಸಿ. ನಂ.142/73-74 ಮತ್ತು ಸೇವಾ ವಹಿಯನ್ನು ದಾಖಲೆಯನ್ನು ಪರಿಶೀಲಿಸಿರುತ್ತಾರೆ. ಪರಿಶೀಲನೆಯಿಂದ ಇವರು ಬ್ರಾಹ್ಮಣರ ಜಾತಿಯವರೆಂದು ದೃಢಪಟ್ಟಿರುತ್ತದೆ.

ಅಂದರೆ ಸದರಿಯವರು ಈ ಕಛೇರಿಯಿಂದ ದಿನಾಂಕ:24.06.1993 ರಲ್ಲಿ ಮಾಲೇರು ಎಂಬ ಜಾತಿಯವರೆಂದು ಸುಳ್ಳು ದಾಖಲೆ ಹಾಗೂ ಮಾಹಿತಿಗಳನ್ನು ನೀಡಿ ಜಾತಿ ಪ್ರಮಾಣ ಪತ್ರವನ್ನು ಪಡೆದಿದ್ದಾರೆ ಎಂದು ಖಚಿತವಾಗಿರುತ್ತದೆ ಅಲ್ಲದೆ ಸದರಿಯವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿರಿಸಿದ ಉದ್ಯೋಗವನ್ನು ಮೋಸದಿಂದ ಪಡೆದುಕೊಂಡಿದ್ದಾರೆಂದು ದೃಢಪಟ್ಟಿರುತ್ತದೆ. ಅಲ್ಲದೆ ಸದರಿಯವರಿಗೆ ಈ ಕಛೇರಿಯಿಂದ ದಿನಾಂಕ:22.05.2008ರಂದು ತಿಳುವಳಿಕೆ ಪತ್ರವನ್ನು ನೊಂದಣಿ ಅಂಚೆ ಮೂಲಕ ಕಳುಹಿಸಿಕೊಟ್ಟಿದ್ದು ಸದರಿಯವರು ಈ ಮೊದಲು ನೀಡಿದ್ದ ದಾಖಲೆಗಳನ್ನು ಮತ್ತೊಮ್ಮೆ ಹಾಜರ್‌ಪಡಿಸಿದ್ದಾರೆ ಇವು ಈಗಾಗಲೇ ಸುಳ್ಳು ದಾಖಲೆಗಳೆಂದು ಸಾಬೀತಾಗಿರುತ್ತದೆ.

**ಆದೇಶ**

**ಸಂಖ್ಯೆ: ಎಂಎಸ್‌ಸಿ/ ಸಿಆರ್/12/2008–09, ದಿನಾಂಕ:13ನೇ ಅಕ್ಟೋಬರ್, 2008**

ಪ್ರಸ್ತಾವನೆಯಲ್ಲಿ ಉಲ್ಲೇಖದಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ಮತ್ತೊಮ್ಮೆ ಈ ಕಛೇರಿಯಿಂದ ತಿಳುವಳಿಕೆ ಪತ್ರವನ್ನು ದಿನಾಂಕ:27.03.2008 ರಲ್ಲಿ ನೊಂದಣಿ ಅಂಚೆ ಮೂಲಕ ಕಳುಹಿಸಲಾಗಿದೆ. ಶ್ರೀ ಗಣಪತಿ ಎಸ್. ಬಿನ್ ಸುಬ್ಬಯ್ಯ ರವರು ಈಗಾಗಲೇ ಈ ಕಛೇರಿಯಿಂದ ದಿನಾಂಕ:24.06.1993 ರಂದು ನೀಡಿರುವ ಮಾಲೇರು ಎಂಬ ಜಾತಿಯನ್ನು ಸಮರ್ಥಿಸಿಕೊಳ್ಳಲು ಯಾವುದೇ ಪೂರಕ ದಾಖಲೆಗಳನ್ನು ಹಾಜರುಪಡಿಸುವಲ್ಲಿ ಸಂಪೂರ್ಣವಾಗಿ ವಿಫಲರಾಗಿರುತ್ತಾರೆ. ಮತ್ತು ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ಮಟ್ಟದ ಅಧ್ಯಕ್ಷರು ಜಾತಿ ಪರಿಶೀಲನಾ ಸಮಿತಿಯವರ ಅಧ್ಯಕ್ಷತೆಯಲ್ಲಿ ತೆಗೆದುಕೊಂಡ ಪರಿಶೀಲನಾ ವರದಿಯನ್ನು ಯಥಾವತ್ತಾಗಿ ಅಂಗೀಕರಿಸಿ ಗಣಪತಿ ಎಸ್. ಬಿನ್ ಸುಬ್ಬಯ್ಯ, ನಂ.141, ಜಿಬಿಎಸ್, 6ನೇ ಅಡ್ಡರಸ್ತೆ, ಮಾರತ್‌ಹಳ್ಳಿ ಬೆಂಗಳೂರು–37 ರವರಿಗೆ ಈ ಕಛೇರಿಯಿಂದ ದಿನಾಂಕ:24.06.1993 ರಂದು ನೀಡಿರುವ ಮಾಲೇರು ಜಾತಿ ಪ್ರಮಾಣ ಪತ್ರವನ್ನು ರದ್ದುಪಡಿಸಲಾಗಿದೆ.

ತಹಸೀಲ್ದಾರ್,
ಪಿ.ಆರ್.1251 ಬೆಂಗಳೂರು ದಕ್ಷಿಣ ತಾಲ್ಲೂಕು,
ಬೆಂಗಳೂರು.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ–4, ಕಾರ್ಮಿಕಭವನ, ಬನ್ನೇರುಘಟ್ಟರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು–560029**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ: ಸಿಆರ್–10/2008, ದಿನಾಂಕ:25ನೇ ನವೆಂಬರ್, 2008**

| **ಅರ್ಜಿದಾರರು:** | **ಪ್ರತಿವಾದಿಗಳು:** |
| --- | --- |
| ಶ್ರೀಮತಿ ಸುಲೋಚನಾ ಕೋಂ ಸಿ.ಸುಬ್ರಮಣಿ, 174, 2ನೇ ಕ್ರಾಸ್, ಹನುಮಂತಪುರಂ, ಶ್ರೀರಾಮಪುರಂ, ಬೆಂಗಳೂರು–21. | ಸೀನಿಯರ್ ಡಿವಿಜನಲ್ ಫೈನಾನ್ಸ್ ಮ್ಯಾನೇಜರ್, ಸೌತ್ ವೆಸ್ಟರ್ನ್ ರೈಲ್ವೆ, ಎಸ್ ಮತ್ತು ಟಿ. ಡಿಪಾರ್ಟ್‌ಮೆಂಟ್, ಬೆಂಗಳೂರು ಡಿವಿಜನ್, ಬೆಂಗಳೂರು. |

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಸುಲೋಚನಾ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ಸಿ.ಸುಬ್ರಮಣಿ ಇವರು ಪ್ರತಿವಾದಿ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

**ಸೋಮಣ್ಣ**
ಪಿ.ಆರ್.1340 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ–4, ಬೆಂಗಳೂರು.

**ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ**

**ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, 6ನೇ ಮಹಡಿ, ಕೆ.ಹೆಚ್.ಬಿ. ಕಾಂಪ್ಲೆಕ್ಸ್, ಕಾವೇರಿ ಭವನ, ಕೆ.ಜಿ. ರಸ್ತೆ, ಬೆಂಗಳೂರು–560009**

**ಅಧಿಸೂಚನೆ**

**ಸಂಖ್ಯೆ: ಡಿಪಿಎನ್/ ಕೇಂಸ/ವಿವ/16/2008–09, ದಿನಾಂಕ:28ನೇ ಜುಲೈ, 2008**

**ವಿಷಯ:** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿಯಲ್ಲಿ ಸಾರ್ವಜನಿಕ ಮಾಹಿತಿ ಅಧಿಕಾರಿಯವರನ್ನು ಬದಲಾಯಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಅಧಿಸೂಚನೆ ಸಂಖ್ಯೆ: ಡಿಪಿಎನ್: ಕೇಂಸ:ವಿವ:17:2005–06, ದಿನಾಂಕ:10.10.2005.

2) ಈ ಕಛೇರಿಯ ಅಧಿಸೂಚನೆ ಸಂಖ್ಯೆ: ಡಿಪಿಎನ್:ಕೇಂಸ:ವಿವ:17:2005–06, ದಿನಾಂಕ:25.02.2008.

ಈ ಕಛೇರಿಯ ಉಲ್ಲೇಖ (2)ರ ಅಧಿಸೂಚನೆಯಲ್ಲಿ ಮಾಹಿತಿ ಪಡೆಯಲು ಹಕ್ಕು ಕಾಯ್ದೆ 2005ರ ಸೆಕ್ಷನ್ 5(1) ಮತ್ತು 5(2)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ 'ಅಭಿಯೋಗ ಉಪನಿರ್ದೇಶಕರು' (ಕ್ರಿಮಿನಲ್), ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು–9, ಇವರನ್ನು ಈ ಕಛೇರಿಯ 'ಸಾರ್ವಜನಿಕ ಮಾಹಿತಿ ಅಧಿಕಾರಿ' ಎಂದು ನೇಮಕ ಮಾಡಲಾಗಿತ್ತು. ಈ ಕಛೇರಿಯ ದಿನಾಂಕ:25.02.2008 (ಉಲ್ಲೇಖ–2)ರ ಅಧಿಸೂಚನೆಯನ್ನು ರದ್ದುಪಡಿಸಲಾಗಿದೆ. ಸದರಿ ಕಾಯ್ದೆಯ ಸೆಕ್ಷನ್ 5(1) ಮತ್ತು 5(2)ರ ಅಡಿ ಪ್ರದಕ್ತವಾದ ಅಧಿಕಾರವನ್ನು ಚಲಾಯಿಸಿ 'ಜಂಟಿ ಅಭಿಯೋಗ ನಿರ್ದೇಶಕರು (ಆಡಳಿತ)' ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು–9, ಇವರನ್ನು ಈ ಕಛೇರಿಯ 'ಸಾರ್ವಜನಿಕ ಮಾಹಿತಿ ಅಧಿಕಾರಿ' ಎಂದು ತಕ್ಷಣದಿಂದ ಜಾರಿಗೆ ಬರುವಂತೆ ನೇಮಕ ಮಾಡಲಾಗಿದೆ.

**ಸದಾಶಿವಮೂರ್ತಿ**

ಪಿ.ಆರ್.909

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ
ನಿರ್ದೇಶಕರು, ಬೆಂಗಳೂರು.

**ಕರ್ನಾಟಕ ಅರಣ್ಯ ಇಲಾಖೆ**

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ಅರಣ್ಯ ಸಂಚಾರಿ ದಳ, ಶಿವಮೊಗ್ಗ**

**ಪ್ರಕಟಣೆ**

**ಸಂಖ್ಯೆ: ಎ1.71ಎ.ಅಮೊ.11/2008–09, ದಿನಾಂಕ:19ನೇ ಜುಲೈ, 2008**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಬೀಟೆ ಮರದ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ಈ ಕೆಳಕಂಡ ವಾಹನಗಳನ್ನು ವಶಪಡಿಸಿಕೊಂಡು ಬೀಟೆ ಹಲಗೆ ಮತ್ತು ಸೈಜುಗಳನ್ನು ಹಾಗೂ ಸದರಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯ್ದೆ 71–ಎ ಪ್ರಕಾರ ಮುಂದಿನ ದಾವೆ ನಡೆಸಲು ಈ ನ್ಯಾಯಾಲಯದ ಮುಂದೆ ಹಾಜರು ಪಡಿಸಿರುತ್ತಾರೆ.

ಆದುದರಿಂದ ಸದರಿ ವಾಹನಗಳ ಸಂಬಂಧದಲ್ಲಿ ಯಾವುದೇ ಹಕ್ಕು ಬಾಧ್ಯತೆಗಳು ರುಜುವಾತುಪಡಿಸಲು ಇದ್ದಲ್ಲಿ ಅಂತಹ ವ್ಯಕ್ತಿಗಳು ತಮ್ಮಲ್ಲಿ ಇರುವ ವಾಹನದ ಮಾಲಿಕತ್ವದ ಮೂಲ ದಾಖಲಾತಿಗಳನ್ನು ಈ ಪ್ರಕಟಣೆ ಪ್ರಕಟವಾದ 30 ದಿವಸದೊಳಗಾಗಿ ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲೀಕತ್ವವನ್ನು ರುಜುವಾತುಪಡಿಸುವುದು. ನಿಗದಿಪಡಿಸಿದ ಅವಧಿಯೊಳಗಡೆ ಯಾವುದೇ ಅಹವಾಲು ಇಲ್ಲವಾದಲ್ಲಿ ಅಥವಾ ನಂತರ ಯಾವುದೇ ಅಹವಾಲು ಬಂದಲ್ಲಿ ಅವನ್ನು ಪರಿಗಣಿಸಲಾಗುವುದಿಲ್ಲ ಹಾಗೂ 1963ರ ಕರ್ನಾಟಕ ಅರಣ್ಯ ಕಾಯ್ದೆಯ 71–ಎ ನಿಂದ ಎಫ್ ವರೆಗಿನ ವಿಧಿಯಂತೆ ಮುಂದಿನ ಕ್ರಮ ಜರುಗಿಸಲಾಗುವುದು.

| ಅ.ಮೊ.ಸಂಖ್ಯೆ ಮತ್ತು ದಿನಾಂಕ | ವಾಹನ ಮಾದರಿ ಹಾಗೂ ಅದರ ಸಂಖ್ಯೆ | ಛಾಸಿಯ ಸಂಖ್ಯೆ | ಇಂಜಿನ್ ಸಂಖ್ಯೆ |
|---|---|---|---|
| ಮೊಕದ್ದಮೆ ದಾಖಲು ಪಡಿಸಿದವರು | | | |
| ವನಪಾಲಕ, ಅರಣ್ಯ ಸಂಚಾರಿ ದಳ, ಶಿವಮೊಗ್ಗ | | | |
| 11/08–09<br>09.07.08 | ಮಹೀಂದ್ರ ಗೂಡ್ಸ್ ರಿಕ್ಷಾ, ಕೆಎ–15–2474 | ಟಿಒ.5060602 ಹೆಚ್01 | ಡಿ–12023760 |
| | ಬಜಾಜ್ ಪಲ್ಸರ್ ಬೈಕ್, ಕೆಎ–15–ಜೆ–4633 | ಡಿಹೆಚ್ಎಬಿ.ಎಲ್ಡಿ.22693 | ಡಿಹೆಚ್ಜಿಬಿಎಲ್ಡಿ–21901 |

ಪಿ.ಆರ್.894

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ಅರಣ್ಯ ಸಂಚಾರಿ ದಳ, ಶಿವಮೊಗ್ಗ**

**ಪ್ರಕಟಣೆ**

**ಸಂಖ್ಯೆ: ಎ1.71ಎ.ಅಮೊ.13/2008-09, ದಿನಾಂಕ:19ನೇ ಜುಲೈ, 2008**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಬೀಟೆ ಮರದ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ಈ ಕೆಳಕಂಡ ವಾಹನಗಳನ್ನು ವಶಪಡಿಸಿಕೊಂಡು ಬೀಟೆ ತುಂಡುಗಳನ್ನು ಹಾಗೂ ಸದರಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯ್ದೆ 71-ಎ ಪ್ರಕಾರ ಮುಂದಿನ ದಾವೆ ನಡೆಸಲು ಈ ನ್ಯಾಯಾಲಯದ ಮುಂದೆ ಹಾಜರು ಪಡಿಸಿರುತ್ತಾರೆ.

ಆದುದರಿಂದ ಸದರಿ ವಾಹನಗಳ ಸಂಬಂಧದಲ್ಲಿ ಯಾವುದೇ ಹಕ್ಕು ಬಾಧ್ಯತೆಗಳು ರುಜುವಾತುಪಡಿಸಲು ಇದ್ದಲ್ಲಿ ಅಂತಹ ವ್ಯಕ್ತಿಗಳು ತಮ್ಮಲ್ಲಿ ಇರುವ ವಾಹನದ ಮಾಲಿಕತ್ವದ ಮೂಲ ದಾಖಲಾತಿಗಳನ್ನು ಈ ಪ್ರಕಟಣೆ ಪ್ರಕಟವಾದ 30 ದಿವಸದೊಳಗಾಗಿ ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲೀಕತ್ವವನ್ನು ರುಜುವಾತುಪಡಿಸುವುದು. ನಿಗದಿಪಡಿಸಿದ ಅವಧಿಯೊಳಗಡೆ ಯಾವುದೇ ಅಹವಾಲು ಇಲ್ಲವಾದಲ್ಲಿ ಅಥವಾ ನಂತರ ಯಾವುದೇ ಅಹವಾಲು ಬಂದಲ್ಲಿ ಅವನ್ನು ಪರಿಗಣಿಸಲಾಗುವುದಿಲ್ಲ ಹಾಗೂ 1963ರ ಕರ್ನಾಟಕ ಅರಣ್ಯ ಕಾಯ್ದೆಯ 71-ಎ ನಿಂದ ಎಫ್ ವರೆಗಿನ ವಿಧಿಯಂತೆ ಮುಂದಿನ ಕ್ರಮ ಜರುಗಿಸಲಾಗುವುದು.

| ಅ.ಮೊ.ಸಂಖ್ಯೆ ಮತ್ತು ದಿನಾಂಕ | ವಾಹನ ಮಾದರಿ ಹಾಗೂ ಅದರ ಸಂಖ್ಯೆ | ಛಾಸಿಯ ಸಂಖ್ಯೆ | ಇಂಜಿನ್ ಸಂಖ್ಯೆ |
|---|---|---|---|
| ಮೊಕದ್ದಮೆ ದಾಖಲು ಪಡಿಸಿದವರು | | | |
| ವನಪಾಲಕ, ಅರಣ್ಯ ಸಂಚಾರಿ ದಳ, ಶಿವಮೊಗ್ಗ | | | |
| 13/08-09 12.07.2008 | ಮಾರುತಿ ಒಮ್ನಿ ವ್ಯಾನ್ ಕೆಎ-05-ಎಂ-7988 | ಎಸ್.ಟಿ.91-ಐಎನ್.983695. | ಎಫ್8.ಬಿಐಎನ್-1033912 |

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ.

ಪಿ.ಆರ್.895

**ಕಂದಾಯ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಕಂಇ 64 ಎಲ್ಆರ್ಎಂ 2007, ಬೆಂಗಳೂರು, ದಿನಾಂಕ:18ನೇ ಜುಲೈ, 2008**

ಯಡತೊರೆ ಜಗದ್ಗುರು ಶ್ರೀ ಯೋಗನಂದೇಶ್ವರ ಸರಸ್ವತಿ ಮಠ, ಕೃಷ್ಣರಾಜನಗರ, ಮೈಸೂರು ಜಿಲ್ಲೆ ಇವರಿಗೆ ಕೃಷ್ಣರಾಜನಗರ ತಾಲ್ಲೂಕು, ಹೆಬ್ಸೂರು ಗ್ರಾಮದ ಸ.ನಂ.154ರಲ್ಲಿ 1 ಎಕರೆ 17 ಗುಂಟೆ ಕೃಷಿ ಜಮೀನನ್ನು ಧಾರ್ಮಿಕ ಹಾಗೂ ಆಧ್ಯಾತ್ಮಿಕ ಉದ್ದೇಶಕ್ಕಾಗಿ ನಮೂನೆ-15ಎ ಮತ್ತು ನಮೂನೆ15-ಎಎ, ಗಳಲ್ಲಿನ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಇವರು ಪತ್ರಸಂಖ್ಯೆ: ಭೂಸು.ಸಿಆರ್.3/2006-07 ದಿನಾಂಕ:06.09.2007ರ ಪ್ರಸ್ತಾಪಿತ ಮೇಲ್ಕಂಡ ಗ್ರಾಮದ ಸರ್ವೆ ನಂಬರ್ 154ರಲ್ಲಿ ಒಟ್ಟು 1ಎಕರೆ 17 ಗುಂಟೆ ಕೃಷಿ ಜಮೀನನ್ನು ಖರೀದಿಸಲು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109(1ಎ) ರಡಿ ಅನುಮೋದನೆ/ ವಿನಾಯಿತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನು ಖರೀದಿಸಲು ಖಾತೆದಾರರಿಂದ ಕರಾರು ಪತ್ರ ಮಾಡಿಕೊಂಡಿರುತ್ತಾರೆ ಹಾಗೂ ಸದರಿ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇಲೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿರ್ಬಂಧನೆಗಳನ್ನು ವಿಧಿಸಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(1ಎ)ರಡಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆಗೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38-ಬಿ ಮತ್ತು 38-ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79-ಬಿ ಮತ್ತು 80ಕ್ಕೆ ವಿನಾಯಿತಿ ನೀಡಿ ಯಡತೊರೆ ಜಗದ್ಗುರು ಶ್ರೀ ಯೋಗನಂದೇಶ್ವರ ಸರಸ್ವತಿ ಮಠ, ಕೃಷ್ಣರಾಜನಗರ, ಮೈಸೂರು ಜಿಲ್ಲೆ ಇವರಿಗೆ ಕೃಷ್ಣರಾಜನಗರ ತಾಲ್ಲೂಕು, ಹೆಬ್ಸೂರು ಗ್ರಾಮದ ಸ.ನಂ.154ರಲ್ಲಿ 1 ಎಕರೆ 17 ಗುಂಟೆ ಕೃಷಿ ಜಮೀನನ್ನು ಧಾರ್ಮಿಕ ಹಾಗೂ ಆಧ್ಯಾತ್ಮಿಕ ಉದ್ದೇಶಕ್ಕಾಗಿ ಕೃಷಿ ಭೂಮಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1ಎ) ಅಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ.

